CPMG / KA / BG-GPO/13/2003-2005

ವಿಶ್ವಮಾನವ ವರ್ಷ



# ಕರ್ನಾಟಕ ರಾಜ್ಯಪತ್ರ

ಅಧಿಕೃತವಾಗಿ ಪ್ರಕಟಿಸಲಾದುದು

| ಸಂಪುಟ ೧೩೯ | ಬೆಂಗಳೂರು, ಗುರುವಾರ, ಏಪ್ರಿಲ್ ೧, ೨೦೦೪ (ಚೈತ್ರ ೧೨, ಶಕ ವರ್ಷ ೧೯೨೬) | ಸಂಚಿಕೆ ೧೪ |
|---|---|---|

## ಭಾಗ - ೧

## ರಾಜ್ಯ ಸರ್ಕಾರದ ಮುಖ್ಯ ಆದೇಶಗಳು ಹಾಗೂ ಸುತ್ತೋಲೆ ಮುಂತಾಗಿ ಎಲ್ಲಾ ಇಲಾಖೆಗಳಿಗೂ ಸಂಬಂಧಿಸಿದ ಆದೇಶಗಳು.

### ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಸಚಿವಾಲಯ

**ವಿಷಯ:** ಡಾ: ಸಿ. ರಾಜಣ್ಣ, ಸಹಾಯಕ ಶಸ್ತ್ರ ಚಿಕಿತ್ಸಕರು ಎಸ್.ಎನ್.ಆರ್. ಆಸ್ಪತ್ರೆ, ಕೋಲಾರ ಇವರು ಸರ್ಕಾರಿ ಸೇವೆಗೆ ಅನಧಿಕೃತ ಗೈರುಹಾಜರಾದುದಕ್ಕೆ ಇವರನ್ನು ಸೇವೆಯಿಂದ ವಜಾ ಮಾಡುವ ದಂಡನೆ ವಿಧಿಸುವ ಬಗ್ಗೆ ಆದೇಶ.

**ಓದಲಾಗಿದೆ:**
1. ಸರ್ಕಾರದ ಷೋಕಾಸ್ ನೋಟೀಸ್ ಸಂಖ್ಯೆ: ಆಕುಕ 326 ಎಂಎಸ್ಎ 88 ದಿನಾಂಕ:13.10.1988.
2. ಜನವಾಹಿನಿ ದಿನಾಂಕ: 8.10.2003 ರ ದಿನ ಪತ್ರಿಕೆಯಲ್ಲಿ ಪ್ರಕಟಣೆ.
3. ನಿರ್ದೇಶಕರು, ವಾರ್ತಾ ಮತ್ತು ಪ್ರಚಾರ ಇಲಾಖೆ, ಬೆಂಗಳೂರು ಇವರ ಪತ್ರ ಸಂಖ್ಯೆ: ವಾಇ/ವಾಪ್ರವಿ/ಸಿ.2/2003-04 ದಿನಾಂಕ: 19.1.2004.

**ಪ್ರಸ್ತಾವನೆ:**

ಡಾ: ಸಿ. ರಾಜಣ್ಣ, ಸಹಾಯಕ ಶಸ್ತ್ರ ಚಿಕಿತ್ಸಕರು, ಎಸ್.ಎನ್.ಆರ್.ಆಸ್ಪತ್ರೆ, ಕೋಲಾರ ಇವರು ಇಲ್ಲಿ ಕಾರ್ಯನಿರ್ವಹಿಸುತ್ತಿದ್ದಾಗ ದಿನಾಂಕ: 23.6.1987 ರಿಂದ 3.8.1987ರ ವರೆಗೆ ರಜೆ ಕೋರಿದ್ದು, ಈ ರಜೆ ಮುಗಿದ ನಂತರ ದಿನಾಂಕ 4.8.1987 ರಿಂದ ಸರ್ಕಾರಿ ಸೇವೆಗೆ ಹಿಂದಿರುಗದೇ ಅನಧಿಕೃತ ಗೈರುಹಾಜರಿ ಆದ ಆಪಾದನೆಗೆ ಸಂಬಂಧಿಸಿದಂತೆ ಇವರ ವಿರುದ್ಧ ಶಿಸ್ತುಕ್ರಮ ಜರುಗಿಸುವ ಸಲುವಾಗಿ ಕರ್ನಾಟಕ ನಾಗರೀಕ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ) ನಿಯಮಾವಳಿ 1957ರ ನಿಯಮ-11 ರಡಿಯಲ್ಲಿ ಮೇಲೆ (1) ರಲ್ಲಿ ಓದಲಾದ ಸರ್ಕಾರದ ಕಾರಣ ಕೇಳುವ ನೋಟೀಸನ್ನು ದೋಷಾರೋಪಣಾ ಪಟ್ಟಿಯಲ್ಲಿಯ ಅನುಬಂಧ-1 ರಿಂದ 4ನ್ನು ಗೊತ್ತಿದ್ದ ವಿಳಾಸಕ್ಕೆ ನೊಂದಣಿ ಅಂಚೆ ಮೂಲಕ ಕಳುಹಿಸಲಾಯಿತು. ಈ ನೋಟೀಸು ಜಾರಿಯಾಗದಿದ್ದ ಪ್ರಯುಕ್ತ ಇವರಿಂದ ಯಾವುದೇ ರಕ್ಷಣಾ ಹೇಳಿಕೆ/ ಪ್ರತಿಕ್ರಿಯೆ ಬಾರದೆ ಇದ್ದುದರಿಂದ ಹಾಗೂ ಅವರು ಯಾವ ಸ್ಥಳದಲ್ಲಿ ಇರುವರೆಂಬ ಬಗ್ಗೆ ಮಾಹಿತಿ ಲಭ್ಯವಾಗದೇ ಇದ್ದುದರಿಂದ ಮತ್ತು ಇವರನ್ನು ಸಂಪರ್ಕಿಸಲು ಕಷ್ಟಸಾಧ್ಯವಾದುದರಿಂದ ಕರ್ನಾಟಕ ನಾಗರೀಕ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ) ನಿಯಮಾವಳಿ 1957ರ ನಿಯಮ-28ಎ (2) ರನ್ವಯ ಕ್ರಮ ಜರುಗಿಸುವ ಸಲುವಾಗಿ ಮೇಲೆ (2) ರಲ್ಲಿ ಓದಲಾದ ಪತ್ರದಲ್ಲಿ ಈ ವೈದ್ಯರ ನೋಟೀಸನ್ನು ದಿನಾಂಕ: 8.10.2003 ಜನವಾಹಿನಿ ಪತ್ರಿಕೆಯಲ್ಲಿ ಪ್ರಕಟಿಸಲಾಯಿತು. ಪ್ರಕಟಣೆಯಲ್ಲಿನ ಪತ್ರಿಕೆಯ 1 ಮತ್ತು 2ನೇ ಕಂಡಿಕೆಗಳನ್ನು ಈ ಕೆಳಗೆ ಉದ್ಧರಿಸಿದೆ.

> "ಡಾ: ಸಿ. ರಾಜಣ್ಣ, ಸಹಾಯಕ ಶಸ್ತ್ರ ಚಿಕಿತ್ಸಕರು ಆದ ನೀವು ಎಸ್.ಎನ್.ಆರ್. ಆಸ್ಪತ್ರೆ, ಕೋಲಾರ ಇಲ್ಲಿ ಕರ್ತವ್ಯ ನಿರ್ವಹಿಸುತ್ತಿದ್ದಾಗ ಈ ಕೆಳಗಿನ ಆಪಾದನೆಗೆ ಒಳಗಾಗಿದ್ದೀರಿ. ಆಪಾದನೆ ದಿನಾಂಕ: 4.8.1987 ರಿಂದ ಕರ್ತವ್ಯಕ್ಕೆ ಅನಧಿಕೃತ ಗೈರುಹಾಜರಾದ ಬಗ್ಗೆ. ಈ ಆಪಾದನೆ ಬಗ್ಗೆ ನಿಮ್ಮ ವಿರುದ್ಧ ಕರ್ನಾಟಕ ನಾಗರೀಕ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ) ನಿಯಮಾವಳಿ 1957ರ ನಿಯಮ-11 ರ ಪ್ರಕಾರ ಶಿಸ್ತುಕ್ರಮ ಜರುಗಿಸಲು ಉದ್ದೇಶಿಸಿ ಈ ಬಗೆಗಿನ ಆರೋಪಗಳ ಪಟ್ಟಿಯನ್ನು ಸರ್ಕಾರದ ಪತ್ರ ಸಂಖ್ಯೆ: ಆಕುಕ 326 ಎಂಎಸ್ಎ 88 ದಿನಾಂಕ: 21.12.1992 ರಲ್ಲಿ ತಮಗೆ ಈ ಕೆಳಗಿನ ವಿಳಾಸಕ್ಕೆ ಕಳುಹಿಸಲಾಗಿತ್ತು. ಆದರೆ ನಿಮ್ಮಿಂದ ಇದಕ್ಕೆ ಯಾವುದೇ ರಕ್ಷಣಾ ಹೇಳಿಕೆ ಈವರೆಗೆ ಬಂದಿಲ್ಲ. ವಿಳಾಸ ಡಾ: ಸಿ. ರಾಜಣ್ಣ, ಸಹಾಯಕ ಶಸ್ತ್ರ ಚಿಕಿತ್ಸಕರು, ಎಸ್.ಎನ್.ಆರ್. ಆಸ್ಪತ್ರೆ, ಕೋಲಾರ. ಆದುದರಿಂದ ಇವರ ಕಛೇರಿಯಿಂದ ಸದರಿ ದೋಷಾರೋಪಣಾ ಪಟ್ಟಿ ಮತ್ತು ನೋಟೀಸನ್ನು ಕೂಡಲೇ ಪಡೆದು ಈ ಪ್ರಕಟಣೆ ಪ್ರಕಟಣೆಯಾದ 15 ದಿನಗಳೊಳಗಾಗಿ ರಕ್ಷಣಾ

ಹೇಳಿಕೆಯನ್ನು ಸಲ್ಲಿಸುವಂತೆ ತಿಳಿಸಲಾಗಿದೆ. ನಿಮ್ಮ ಲಿಖಿತ ಹೇಳಿಕೆ ಈ ಕಾಲಾವಧಿಯಲ್ಲಿ ಬಾರದಿದ್ದ ನಿಮ್ಮ ಹೇಳಿಕೆ ಏನೂ ಇಲ್ಲವೆಂದು ಭಾವಿಸಿ ನಿಯಮಾನುಸಾರ ಮುಂದಿನ ಕ್ರಮ ಕೈಗೊಳ್ಳಲಾಗುವುದು".

ಡಾ: ಸಿ. ರಾಜಣ್ಣರವರು ಪತ್ರಿಕಾ ಪ್ರಕಟಣೆಗೂ ಸ್ಪಂದಿಸದೆ ತಮ್ಮ ಹಾಜರಾತಿಯ ಬಗ್ಗೆ ಯಾವುದೇ ಪ್ರತಿಕ್ರಿಯೆ ತೋರಿಸದೇ. ಇದ್ದುದರಿಂದ 1997 ರಿಂದಲೂ ಅನಧಿಕೃತ ಗೈರುಹಾಜರಾದುದರಿಂದ ಸದರಿಯವರಿಗೆ ಸರ್ಕಾರಿ ಸೇವೆಯಲ್ಲಿ ಮುಂದುವರೆಯಲು ಮನಸ್ಸಿಲ್ಲ ಎಂಬುದನ್ನು ಸರ್ಕಾರವು ಸ್ಪಷ್ಟಪಡಿಸಿಕೊಂಡು ಇವರ ಆಪಾದನೆಯನ್ನು ಸರ್ಕಾರವು ಗಂಭೀರವಾಗಿ ಪರಿಗಣಿಸಿ ಕರ್ನಾಟಕ ನಾಗರೀಕ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ), ನಿಯಮಾವಳಿಗಳು 1957ರ, ನಿಯಮ 14(ii) ನ್ನು ಓದಿಕೊಂಡು ಸದರಿ ನಿಯಮಾವಳಿಗಳ ನಿಯಮ 8 (viii)ರಡಿಯಲ್ಲಿ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ, ಸದರಿ ವೈದ್ಯರನ್ನು ಸೇವೆಯಿಂದ ವಜಾ ಮಾಡುವ ದಂಡನೆಯನ್ನು ವಿಧಿಸಲು ಸರ್ಕಾರವು ನಿರ್ಧರಿಸಿದೆ. ಆದುದರಿಂದ ಈ ಕೆಳಕಂಡ ಆದೇಶ.

**ಆದೇಶ ಸಂಖ್ಯೆ:ಆಕುಕ 326 ಎಂಎಸ್ಎ 88, ಬೆಂಗಳೂರು, ದಿನಾಂಕ: 19ನೇ ಫೆಬ್ರವರಿ 2004**

ಪ್ರಸ್ತಾವನೆಯಲ್ಲಿ ವಿವರಿಸಿದ ಕಾರಣಗಳಿಂದಾಗಿ, ಸರ್ಕಾರವು, ಕರ್ನಾಟಕ ನಾಗರೀಕ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ), ನಿಯಮಾವಳಿಗಳು 1957ರ, ನಿಯಮ 14(ii) ಮತ್ತು 8 (viii) ರಲ್ಲಿ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ, ಡಾ: ಸಿ. ರಾಜಣ್ಣ, ಸಹಾಯಕ ಶಸ್ತ್ರ ಚಿಕಿತ್ಸಕರು, ಎಸ್.ಎನ್.ಆರ್. ಆಸ್ಪತ್ರೆ, ಕೋಲಾರ ಇವರನ್ನು ತಕ್ಷಣದಿಂದ ಜಾರಿಗೆ ಬರುವಂತೆ ಸರ್ಕಾರಿ ಸೇವೆಯಿಂದ ವಜಾ ಮಾಡುವ ದಂಡನೆ ವಿಧಿಸಿ ಆದೇಶಿಸಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 288

**ಎಸ್.ಕೆ. ತೆಗ್ಗಿನಮನಿ**

ಸರ್ಕಾರದ ಅಧೀನ ಕಾರ್ಯದರ್ಶಿ, ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಇಲಾಖೆ.

**ವಿಷಯ:** ಡಾ: ಅನೀಸ್ ಅಹಮದ್, ಸಹಾಯಕ ದಂತ ವೈದ್ಯರು ಸಾರ್ವಜನಿಕ ಆಸ್ಪತ್ರೆ, ಶ್ರೀರಂಗಪಟ್ಟಣ, ಮಂಡ್ಯ ಜಿಲ್ಲೆ ಇವರು ಸರ್ಕಾರಿ ಸೇವೆಗೆ ಅನಧಿಕೃತ ಗೈರುಹಾಜರಾದುದರಿಂದ ಇವರನ್ನು ಸೇವೆಯಿಂದ ವಜಾ ಮಾಡುವ ಬಗ್ಗೆ ಆದೇಶ.

**ಓದಲಾಗಿದೆ:**

1. ಸರ್ಕಾರದ ಕಾರಣ ಕೇಳುವ ನೋಟೀಸ್ ಸಂಖ್ಯೆ: ಆಕುಕ 10 ಹೆಚ್ಎಸ್ಡಿ 86 ದಿನಾಂಕ:27.8.1993.
2. ಡಾ: ಎನ್. ಅನೀಸ್ ಅಹಮದ್, ವೈದ್ಯಾಧಿಕಾರಿ ರಕ್ಷಣಾ ಹೇಳಿಕೆ ಸಲ್ಲಿಸಿರುವುದಿಲ್ಲ.
3. ಸರ್ಕಾರದ ಆದೇಶ ಸಂಖ್ಯೆ: ಆಕುಕ 10 ಹೆಚ್ಎಸ್ಡಿ 86 ದಿನಾಂಕ: 7.10.1999.
4. ಮುಖ್ಯ ಜಾಗೃತಾಧಿಕಾರಿ (ಜಾಗೃತ ಕೋಶ), ಆರೋಗ್ಯ ಮತ್ತು ಕು.ಕ.ಸೇವೆಗಳು, ಬೆಂಗಳೂರು ಇವರ ವಿಚಾರಣಾ ವರದಿ ಸಂಖ್ಯೆ: ವಿಅ/ ವಿಚಾರಣೆ/12/ 1999-2000 ದಿನಾಂಕ: 28.9.2001.
5. ಸರ್ಕಾರದ ತಿಳುವಳಿಕೆ ಪತ್ರ ಸಂಖ್ಯೆ: ಆಕುಕ 203 ಎಂಎಸ್ಎ 99 ದಿನಾಂಕ: 30.10.2001.
6. ಈ ಸಂಜೆ ದಿನಪತ್ರಿಕೆಯ ಪ್ರಕಟಣೆ ದಿನಾಂಕ: 11.10.2003.

**ಪ್ರಸ್ತಾವನೆ:**

ಡಾ: ಅನೀಸ್ ಅಹಮದ್, ಸಹಾಯಕ ದಂತ ವೈದ್ಯರು, ಸಾರ್ವಜನಿಕ ಆಸ್ಪತ್ರೆ ಶ್ರೀರಂಗಪಟ್ಟಣ, ಮಂಡ್ಯ ಜಿಲ್ಲೆ ಇವರು ಇಲ್ಲಿ ಕರ್ತವ್ಯ ನಿರ್ವಹಿಸುತ್ತಿದ್ದಾಗ ದಿನಾಂಕ: 1.2.1985 ರಿಂದ 28.2.1985 ರವರೆಗೆ ಸ್ವಂತ ಕೆಲಸಗಳಿಗಾಗಿ ರಜೆಯ ಮೇಲೆ ತೆರಳಿ, ರಜೆ ಮುಗಿದ ನಂತರ ಸರ್ಕಾರಿ ಸೇವೆಗೆ ಹಾಜರಾಗದೆ ರಜೆಯನ್ನು ಮುಂದುವರೆಸಿ; ಮುಂದುವರಿಸಿದ ಅವಧಿಗೆ ರಜೆ ಮಂಜೂರಾಗದೆ ಇದ್ದರೂ ರಜೆಯಿಂದ ಹಿಂತಿರುಗಲು ಕರೆ ನೋಟೀಸ್ ಕಳುಹಿಸಿದ್ದಾಗ್ಯೂ ಅನಧಿಕೃತ ಗೈರುಹಾಜರಾದ ಆರೋಪಕ್ಕೆ ಸಂಬಂಧಿಸಿರುವಂತೆ ಮೇಲೆ (1) ರಲ್ಲಿ ಓದಲಾದ ಕಾರಣ ಕೇಳುವ ನೋಟೀಸನ್ನು ದೋಷಾರೋಪಣೆ ಪಟ್ಟಿಯೊಂದಿಗೆ ಹೊರಡಿಸಿ ಅವರ ವಿರುದ್ಧ ಮಾಡಲಾದ ಆರೋಪಗಳ ಬಗ್ಗೆ ವಿವರಣೆ ಸಲ್ಲಿಸುವಂತೆ ನಿರ್ದೇಶಿಸಲಾಗಿತ್ತು. ಸದರಿ ನೋಟೀಸಿಗೆ ಆರೋಪಿತ ವೈದ್ಯರು ರಕ್ಷಣಾ ಹೇಳಿಕೆಯನ್ನು ಸಲ್ಲಿಸಿರುವುದಿಲ್ಲ. ಅವರ ಹೇಳಿಕೆ ಏನೂ ಇಲ್ಲವೆಂದು ಭಾವಿಸಿದೆ. ಆದ್ದರಿಂದ ಈ ಪ್ರಕರಣವನ್ನು ಇಲಾಖಾ ವಿಚಾರಣೆಗೆ ವಹಿಸಲು ತೀರ್ಮಾನಿಸಿ ಮೇಲೆ (3) ರಲ್ಲಿ ಓದಲಾದ ಸರ್ಕಾರದ ಆದೇಶದಲ್ಲಿ ವಿಚಾರಣಾಧಿಕಾರಿ ಹಾಗೂ ಮಂಡನಾಧಿಕಾರಿಗಳನ್ನು ನೇಮಿಸಿ ವಿಚಾರಣೆ ನಡೆಸಿ. ವಿಚಾರಣಾ ವರದಿಯನ್ನು ಸರ್ಕಾರಕ್ಕೆ ಸಲ್ಲಿಸುವಂತೆ ನಿರ್ದೇಶಿಸಲಾಗಿತ್ತು.

ವಿಚಾರಣಾಧಿಕಾರಿಗಳು ನಿಯಮಾನುಸಾರ ವಿಚಾರಣೆ ನಡೆಸಿ, ಮೇಲೆ (4)ರಲ್ಲಿ ಓದಲಾದ ಪತ್ರದ ಮೂಲಕ ವಿಚಾರಣಾ ವರದಿಯನ್ನು ಸರ್ಕಾರಕ್ಕೆ ಸಲ್ಲಿಸಿರುತ್ತಾರೆ. ಆರೋಪಿತ ವೈದ್ಯಾಧಿಕಾರಿ ಅವರಿಗೆ ದಿನಾಂಕ: 6.6.2000, 23.6.2000, 11.7.2000, 26.7.2000, 21.8.2000, 5.9.2000, 14.9.2000, 23.9.2000, 5.10.2000, 18.10.2000 ಮತ್ತು 2.11.2000 ಗಳಂದು 11 ಭಾರಿ ವಿಚಾರಣೆಗೆ ಹಾಜರಾಗಲು ನೋಟೀಸ್ ನೀಡಿದ್ದರೂ ಸಹ ವಿಚಾರಣೆಗೆ ಆಪಾದಿತ ವೈದ್ಯರು ಹಾಜರಾಗಿರುವುದಿಲ್ಲವೆಂದು ತಿಳಿಸಿರುತ್ತಾರೆ. ಹಾಗೂ ಆಪಾದಿತ ವೈದ್ಯರ ಮೇಲೆ ಮಾಡಲಾದ ಅನಧಿಕೃತ ಗೈರುಹಾಜರಿಯ ಆರೋಪವು ಸಾಬೀತಾಗಿರುತ್ತದೆಂಬ ನಿರ್ಣಯಕ್ಕೆ ಬಂದಿರುವರು. ಸದರಿ ವಿಚಾರಣಾ ವರದಿಯನ್ನು ಮೇಲೆ (5) ರಲ್ಲಿ ಓದಲಾದ ತಿಳುವಳಿಕೆ ಪತ್ರದ ಮೂಲಕ ಆಪಾದಿತ ವೈದ್ಯರಿಗೆ ಜಾರಿ ಮಾಡಲಾಗಿ ಅದು ಜಾರಿಯಾಗದೆ ಅಂಚೆ ಪ್ರಾಧಿಕಾರದಿಂದ "Where about not known" ಎಂಬ ಷರಾದೊಂದಿಗೆ ವಾಪಸ್ ಬಂದಿರುತ್ತದೆ. ಇವರ ಅನಧಿಕೃತ ಗೈರುಹಾಜರಿ ಬಗ್ಗೆ ರಾಜ್ಯದಲ್ಲಿ ಹೆಚ್ಚು ಪ್ರಚಲಿತವಿರುವ ಎರಡು ದಿನ ಪತ್ರಿಕೆಯಲ್ಲಿ ಪ್ರಕಟಿಸಿದ ನಂತರ 15 ದಿನಗಳೊಳಗಾಗಿ ಲಿಖಿತ ಹೇಳಿಕೆಯನ್ನು ಸಲ್ಲಿಸುವಂತೆ ಪ್ರಕಟಿಸಲು ತಿಳಿಸಲಾಗಿತ್ತು. ಈ ಸಂಜೆ ದಿನ ಪತ್ರಿಕೆಯಲ್ಲಿ ದಿನಾಂಕ: 11.10.2003 ರಂದು ಪ್ರಕಟಿಸಲಾಗಿದೆ. ಆದರೂ ಇದೂವರೆಗೂ ಆಪಾದಿತ ವೈದ್ಯರಿಂದ ಯಾವುದೇ ಪ್ರತಿಕ್ರಿಯೆ/ಪ್ರತಿ ರಕ್ಷಣಾ ಹೇಳಿಕೆ ಬಂದಿರುವುದಿಲ್ಲ.

ಸರ್ಕಾರವು ವಿಚಾರಣಾಧಿಕಾರಿಗಳ ವಿಚಾರಣಾ ವರದಿಯನ್ನು ಹಾಗೂ ಸಂಬಂಧಿಸಿರುವ ದಾಖಲಾತಿಗಳನ್ನು ಕೂಲಂಕಷವಾಗಿ ಪರಿಶೀಲಿಸಿ ಡಾ: ಅನೀಸ್ ಅಹಮದ್, ಸಹಾಯಕ ದಂತ ವೈದ್ಯರು, ಸಾರ್ವಜನಿಕ ಆಸ್ಪತ್ರೆ, ಶ್ರೀರಂಗಪಟ್ಟಣ, ಮಂಡ್ಯ ಜಿಲ್ಲೆ ಇವರು ದಿನಾಂಕ: 1.3.1985 ರಿಂದ ಇಲ್ಲಿಯವರೆಗೂ ಅನಧಿಕೃತ ಗೈರುಹಾಜರಿ ಆಗಿರುವುದು ದೃಢಪಟ್ಟಿರುವುದರಿಂದ ಈ ದುರ್ನಡತೆಯನ್ನು ಗಂಭೀರವಾಗಿ ಪರಿಗಣಿಸಿ ಸದರಿ ವೈದ್ಯರನ್ನು ಸರ್ಕಾರವು, ಕರ್ನಾಟಕ ನಾಗರೀಕ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ), ನಿಯಮಾವಳಿಗಳು 1957ರ, ನಿಯಮ 8 (viii) ರನ್ವಯ ಸರ್ಕಾರಿ ಸೇವೆಯಿಂದ ವಜಾ ಮಾಡುವ ದಂಡನೆಯನ್ನು ವಿಧಿಸಲು ಸರ್ಕಾರವು ತೀರ್ಮಾನಿಸಿದೆ. ಆದುದರಿಂದ ಈ ಕೆಳಕಂಡ ಆದೇಶ.

**ಆದೇಶ ಸಂಖ್ಯೆ:ಆಕುಕ 203 ಎಂಎಸ್ಎ 99, ಬೆಂಗಳೂರು, ದಿನಾಂಕ: 20ನೇ ಫೆಬ್ರವರಿ 2004**

ಪ್ರಸ್ತಾವನೆಯಲ್ಲಿ ವಿವರಿಸಿದ ಕಾರಣಗಳಿಂದಾಗಿ, ಸರ್ಕಾರವು, ಕರ್ನಾಟಕ ನಾಗರೀಕ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ), ನಿಯಮಾವಳಿಗಳು 1957ರ, ನಿಯಮ 8 (viii) ರಲ್ಲಿ ಪ್ರದತ್ತವಾದ ಅಧಿಕಾರಗಳನ್ನು ಚಲಾಯಿಸಿ, ಡಾ: ಅನೀಸ್ ಅಹಮದ್, ಸಹಾಯಕ ದಂತ ವೈದ್ಯರು, ಸಾರ್ವಜನಿಕ ಆಸ್ಪತ್ರೆ, ಶ್ರೀರಂಗಪಟ್ಟಣ ಮಂಡ್ಯ ಜಿಲ್ಲೆ ಇವರನ್ನು ತಕ್ಷಣದಿಂದ ಜಾರಿಗೆ ಬರುವಂತೆ ಸರ್ಕಾರಿ ಸೇವೆಯಿಂದ ವಜಾ ಮಾಡುವ ದಂಡನೆ ವಿಧಿಸಿ ಆದೇಶಿಸಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 289

**ಎಸ್.ಕೆ. ತೆಗ್ಗಿನಮನಿ**

ಸರ್ಕಾರದ ಅಧೀನ ಕಾರ್ಯದರ್ಶಿ, ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಇಲಾಖೆ.

**ವಿಷಯ:** ಡಾ: ಕೆ. ಪೂರ್ಣಿಮ ಶೆಣೈ, ವೈದ್ಯಾಧಿಕಾರಿ (ಸ್ನಾತಕೋತ್ತರ ವಿದ್ಯಾರ್ಥಿ), ಬೆಂಗಳೂರು ವೈದ್ಯಕೀಯ ಮಹಾ ವಿದ್ಯಾಲಯ, ಬೆಂಗಳೂರು ಇವರು ಸರ್ಕಾರಿ ಸೇವೆಗೆ ಅನಧಿಕೃತ ಗೈರುಹಾಜರಾದುದಕ್ಕೆ ಇವರನ್ನು ಸೇವೆಯಿಂದ ವಜಾ ಮಾಡುವ ದಂಡನೆ ವಿಧಿಸುವ ಬಗ್ಗೆ ಆದೇಶ.

**ಓದಲಾಗಿದೆ:**
1. ಸರ್ಕಾರದ ಪತ್ರ ಸಂಖ್ಯೆ: ಆಕುಕ 69 ಎಂಎಸ್ಎ 2002 ದಿನಾಂಕ:14.11.2003.
2. ಜನವಾಹಿನಿ ದಿನಾಂಕ: 21.11.2003 ರ ದಿನ ಪತ್ರಿಕೆಯಲ್ಲಿನ ಪ್ರಕಟಣೆ.
3. ನಿರ್ದೇಶಕರು, ವಾರ್ತಾ ಮತ್ತು ಪ್ರಚಾರ ಇಲಾಖೆ, ಬೆಂಗಳೂರು ಇವರ ಪತ್ರ ಸಂಖ್ಯೆ: ವಾಇ/ವಾಪ್ರವಿ/ ಸಿ.ಇ./2003-04 ದಿನಾಂಕ: 19.1.2004.

**ಪ್ರಸ್ತಾವನೆ:**

ಡಾ: ಕೆ. ಪೂರ್ಣಿಮ ಶೆಣೈ, ವೈದ್ಯಾಧಿಕಾರಿ, ಇವರು ಬೆಂಗಳೂರು ವೈದ್ಯಕೀಯ ಮಹಾವಿದ್ಯಾಲಯ, ಬೆಂಗಳೂರು ಇಲ್ಲಿ ಸ್ನಾತಕೋತ್ತರ ಪದವಿ ವ್ಯಾಸಂಗ (ಸೇವಾ ನಿರತ ವೈದ್ಯರು) ಮಾಡುತ್ತಿರುವಾಗ ದಿನಾಂಕ: 18.2.1985 ರಿಂದ ಸ್ನಾತಕೋತ್ತರ ವ್ಯಾಸಂಗಕ್ಕೆ ಅನಧಿಕೃತ ಗೈರುಹಾಜರಿಯಾಗಿದ್ದು, ಸರ್ಕಾರಿ ಸೇವೆಗೂ ಸಹ ಹಿಂದಿರುಗದೇ ಇದುವರೆವಿಗೂ ಅನಧಿಕೃತ ಗೈರುಹಾಜರಿಯಾಗಿರುತ್ತಾರೆ. ಇವರ ವಿಳಾಸವು ಸಹ ಲಭ್ಯವಾಗದಿದ್ದ ಪ್ರಯುಕ್ತ ಕರ್ನಾಟಕ ನಾಗರೀಕ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ) ನಿಯಮಾವಳಿ 1957ರ ನಿಯಮ-28ಎ (2) ರನ್ವಯ ರಾಜ್ಯದಲ್ಲಿ ಹೆಚ್ಚು ಪ್ರಚಲಿತವಿರುವ ದಿನ ಪತ್ರಿಕೆಯಲ್ಲಿ ಪ್ರಕಟಿಸುವ ಸಲುವಾಗಿ ಮೇಲೆ (1) ರಲ್ಲಿ ಓದಲಾದ ಸರ್ಕಾರದ ನೋಟೀಸನ್ನು ಪ್ರಕಟಿಸಲು ವಾರ್ತಾ ಮತ್ತು ಪ್ರಚಾರ ಇಲಾಖೆಗೆ ತಿಳಿಸಲಾಯಿತು. ಮೇಲೆ (2) ರಲ್ಲಿ ಓದಲಾದ ಪ್ರಕಟಣೆಯಲ್ಲಿ ಡಾ: ಪೂರ್ಣಿಮ ಶೆಣೈ ರವರ ಆಪಾದನೆಗೆ ಸಂಬಂಧಿಸಿದ ನೋಟೀಸನ್ನು "ಜನವಾಹಿನಿ ಮತ್ತು ಡೈಲಿ ಪಾಸ್ವಾನ್" ಎಂಬ ದಿನಪತ್ರಿಕೆಗಳಲ್ಲಿ ದಿನಾಂಕ: 21.11.2003 ರಂದು ಪ್ರಕಟಿಸಿದ್ದು, ಪ್ರಕಟಣೆಯ 1 ಮತ್ತು 2ನೇ ಕಂಡಿಕೆಗಳ ಉದ್ಧೃತ ಭಾಗವು ಈ ಕೆಳಕಂಡಂತಿದೆ.

> "ಡಾ: ಕೆ. ಪೂರ್ಣಿಮ ಶೆಣೈ ಕೆ. ಸ್ನಾತಕೋತ್ತರ ವಿದ್ಯಾರ್ಥಿ, ಬೆಂಗಳೂರು ವೈದ್ಯಕೀಯ ಮಹಾವಿದ್ಯಾಲಯ, ಬೆಂಗಳೂರು ಆದ ನೀವು ದಿನಾಂಕ: 18.2.1985 ರಿಂದ ಸ್ನಾತಕೋತ್ತರ ವ್ಯಾಸಂಗದಲ್ಲಿರುವಾಗ ಅನಧಿಕೃತ ಗೈರುಹಾಜರಿಯಲ್ಲಿ ಇದುವರೆವಿಗೂ ಮುಂದುವರೆದಿರುತ್ತೀರಿ. ಇದು ನಿಮ್ಮ ದುರ್ನಡತೆ ಮತ್ತು ನಿರ್ಲಕ್ಷತನ ತೋರಿಸುತ್ತದೆ. ಅನಧಿಕೃತವಾಗಿ ಸರ್ಕಾರಿ ಸೇವೆಗೆ ಸತತವಾಗಿ 120 ದಿನಗಳಿಗಿಂತ ಹೆಚ್ಚಿಗೆ ಗೈರುಹಾಜರಾಗಿರುವವರನ್ನು ಸೇವೆಯಿಂದ ವಜಾ ಮಾಡುವ ದಂಡನೆ ವಿಧಿಸಲು ನಿಯಮಗಳಲ್ಲಿ ಅವಕಾಶವಿದೆ. ಈ ನಿಮ್ಮ ಅನಧಿಕೃತ ಗೈರುಹಾಜರಿಯನ್ನು ಸರ್ಕಾರವು ಗಂಭೀರವಾಗಿ ಪರಿಗಣಿಸಿದೆ.
>
> ಆದುದರಿಂದ ನೀವು "ಸರ್ಕಾರದ ಪ್ರಧಾನ ಕಾರ್ಯದರ್ಶಿಗಳು, ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಇಲಾಖೆ, ಬಹು ಮಹಡಿಗಳ ಕಟ್ಟಡ, ಗೇಟ್ ನಂ.2, ಡಾ: ಅಂಬೇಡ್ಕರ್ ರಸ್ತೆ, ಬೆಂಗಳೂರು-560 001" ಇವರ ಮುಂದೆ ಖುದ್ದಾಗಿ ಈ ನೋಟೀಸು ಪ್ರಕಟಣೆಯಾದ 15 ದಿನಗಳೊಳಗಾಗಿ ಹಾಜರಾಗತಕ್ಕದ್ದು. ಮತ್ತು ದೀರ್ಘ ಕಾಲದ ಅನಧಿಕೃತ ಗೈರುಹಾಜರಿಗೆ ವಿವರಣೆ ನೀಡುವುದು. ನಿಗದಿತ ಅವಧಿಯಲ್ಲಿ ನಿಮ್ಮ ಹಾಜರಾತಿ ಇಲ್ಲದಿದ್ದಲ್ಲಿ ಸರ್ಕಾರವು ಏಕಪಕ್ಷೀಯವಾಗಿ ನಿಯಮಾನುಸಾರ ಮುಂದಿನ ಕ್ರಮ ಜರುಗಿಸಲಾಗುವುದೆಂದು ತಿಳಿಯುವುದು".

ಡಾ: ಪೂರ್ಣಿಮಾ ಶೆಣೈರವರು 1985 ರಿಂದ ಇಂದಿನವರೆಗೂ ಸದರಿ ನೋಟೀಸಿಗೆ ಸ್ಪಂದಿಸದೆ ಸರ್ಕಾರಕ್ಕೆ ಯಾವುದೇ ಮಾಹಿತಿಯನ್ನು ಸಲ್ಲಿಸದೆ ಅನಧಿಕೃತ ಗೈರುಹಾಜರಿಯಲ್ಲಿಯೇ ಮುಂದುವರೆದಿರುವುದನ್ನು ಸರ್ಕಾರವು ಗಂಭೀರವಾಗಿ ಪರಿಗಣಿಸಿ ಕರ್ನಾಟಕ ನಾಗರೀಕ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ), ನಿಯಮಾವಳಿಗಳು 1957ರ, ನಿಯಮ 14(ii) ನ್ನು ಓದಿಕೊಂಡು ಸದರಿ ನಿಯಮಾವಳಿಗಳ ನಿಯಮ 8 (viii)ರಡಿಯಲ್ಲಿ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ, ಸದರಿ ವೈದ್ಯರನ್ನು ಸೇವೆಯಿಂದ ವಜಾ ಮಾಡುವ ದಂಡನೆಯನ್ನು ವಿಧಿಸಲು ಸರ್ಕಾರವು ನಿರ್ಧರಿಸಿದೆ. ಆದುದರಿಂದ ಈ ಕೆಳಕಂಡ ಆದೇಶ.

**ಆದೇಶ ಸಂಖ್ಯೆ:ಆಕುಕ 69 ಎಂಎಸ್ಎ 2002, ಬೆಂಗಳೂರು, ದಿನಾಂಕ: 19ನೇ ಫೆಬ್ರವರಿ 2004**

ಪ್ರಸ್ತಾವನೆಯಲ್ಲಿ ವಿವರಿಸಲಾದ ಕಾರಣಗಳಿಂದಾಗಿ, ಸರ್ಕಾರವು, ಕರ್ನಾಟಕ ನಾಗರೀಕ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ), ನಿಯಮಾವಳಿಗಳು 1957ರ, ನಿಯಮ 14(ii) ಮತ್ತು 8 (viii) ರಲ್ಲಿ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ, ಡಾ: ಕೆ. ಪೂರ್ಣಿಮ ಶೆಣೈ, ಸ್ನಾತಕೋತ್ತರ ವಿದ್ಯಾರ್ಥಿ ಬೆಂಗಳೂರು ವೈದ್ಯಕೀಯ ಮಹಾ ವಿದ್ಯಾಲಯ, ಬೆಂಗಳೂರು ಇವರನ್ನು ತಕ್ಷಣದಿಂದ ಜಾರಿಗೆ ಬರುವಂತೆ ಸರ್ಕಾರಿ ಸೇವೆಯಿಂದ ವಜಾ ಮಾಡುವ ದಂಡನೆ ವಿಧಿಸಿ ಆದೇಶಿಸಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 290

**ಎಸ್.ಕೆ. ತೆಗ್ಗಿನಮನಿ**

ಸರ್ಕಾರದ ಅಧೀನ ಕಾರ್ಯದರ್ಶಿ, ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಇಲಾಖೆ.

## ವಾಣಿಜ್ಯ ಮತ್ತು ಕೈಗಾರಿಕೆ ಸಚಿವಾಲಯ

## ಸೇರ್ಪಡೆ

**ಸಂಖ್ಯೆ: ವಾಕೈ 163 ರೇಸೇವಿ 2003, ಬೆಂಗಳೂರು, ದಿನಾಂಕ: 3ನೇ ಮಾರ್ಚ್ 2004**

**ವಿಷಯ:** ಡಾ: ಕೆ. ಅಶೋಕ ರೆಡ್ಡಿ, ರೇಷ್ಮೆ ಸಹಾಯಕ ನಿರ್ದೇಶಕರು, ರೇಷ್ಮೆ ಇಲಾಖೆ, ಇವರ ಸೇವೆಯನ್ನು ಕರ್ನಾಟಕ ರಾಜ್ಯ ದೂರಸಂವೇದಿ ಅನ್ವಯಿಕ ಕೇಂದ್ರ, ಬೆಂಗಳೂರು-ಇಲ್ಲಿ ವಿಲೀನಗೊಳಿಸುವ ಬಗ್ಗೆ.

ಸರ್ಕಾರಿ ಆದೇಶ ಸಂಖ್ಯೆ: ವಾಕೈ 163 ರೇಸೇವಿ 2003, ದಿನಾಂಕ: 24.11.2003ರ ಆದೇಶ ಭಾಗದ ಮೂರನೇ ಸಾಲಿನಲ್ಲಿ ಷರತ್ತುಗೊಳಪಟ್ಟು ಎಂಬುದರ ನಂತರ ಅವರು 15 ವರ್ಷಗಳ ಅರ್ಹತಾದಾಯಕ ಸೇವೆಯನ್ನು ಪೂರೈಸಿದ ನಂತರ ಜಾರಿಗೆ ಬರುವಂತೆ ಎಂಬುದನ್ನು ಸೇರಿಸಿಕೊಂಡು ಓದಿಕೊಳ್ಳುವುದು.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 291

**ಮಂಜೇಗೌಡ**

ಸರ್ಕಾರದ ಅಧೀನ ಕಾರ್ಯದರ್ಶಿ, ವಾಣಿಜ್ಯ ಮತ್ತು ಕೈಗಾರಿಕೆ ಇಲಾಖೆ (ರೇಷ್ಮೆ)

## ಸಹಕಾರ ಸಚಿವಾಲಯ

**ವಿಷಯ:** ಗಂಗಾವತಿ ಕೃಷಿ ಉತ್ಪನ್ನ ಮಾರುಕಟ್ಟೆ ಸಮಿತಿಯ ಕಾರ್ಯದರ್ಶಿ ಹುದ್ದೆಯನ್ನು ಈಗಿರುವ ಜಂಟಿ ನಿರ್ದೇಶಕರ ಪದವೃಂದದಿಂದ ಅಪರ ನಿರ್ದೇಶಕರ ಪದವೃಂದಕ್ಕೆ ಉನ್ನತೀಕರಿಸುವ ಬಗ್ಗೆ.

**ಓದಲಾಗಿದೆ:**
1. ಸರ್ಕಾರದ ಆದೇಶ ಸಂಖ್ಯೆ:ಸಮಾತೊ 103 ಮಾಇಸೇ 2000(ಭಾಗ) ದಿನಾಂಕ:11.12.2003.
2. ಮಾನ್ಯ ಕರ್ನಾಟಕ ಆಡಳಿತ ನ್ಯಾಯಮಂಡಳಿಯು ಅರ್ಜಿ ಸಂಖ್ಯೆ:1513/2003ರಲ್ಲಿ ದಿನಾಂಕ:15/12/2003ರಂದು ನೀಡಿರುವ ತೀರ್ಪು.
3. ನಿರ್ದೇಶಕರು, ಕೃಷಿ ಮಾರಾಟ ಇಲಾಖೆ, ಬೆಂಗಳೂರು ಇವರ ಪತ್ರ ಸಂಖ್ಯೆ:ಕೃ.ಮಾ.ಇ/56/ಸಿಬ್ಬಂದಿ-1(ಸಿ) 2004, ದಿನಾಂಕ:5/2/2004,9/2/2004 ಮತ್ತು 25/02/2004.

**ಪ್ರಸ್ತಾವನೆ:**

ಮೇಲೆ ಕ್ರಮಾಂಕ (1) ರಲ್ಲಿ ಓದಲಾದ ದಿನಾಂಕ:11.12.2003ರ ಆದೇಶಾನುಸಾರ ಶ್ರೀ ಶರಶ್ಚಂದ್ರ ರಾನಡೆ, ಕಾರ್ಯದರ್ಶಿ, ಕೃಷಿ ಉತ್ಪನ್ನ ಮಾರುಕಟ್ಟೆ ಸಮಿತಿ, ಮಂಗಳೂರು (ಹಿಂದಿನ ಕಾರ್ಯದರ್ಶಿ, ಕೃಷಿ ಉತ್ಪನ್ನ ಮಾರುಕಟ್ಟೆ ಸಮಿತಿ, ರಾಯಚೂರು) ಇವರ ವಿರುದ್ಧ ರಾಯಚೂರು ಕೃಷಿ ಉತ್ಪನ್ನ ಮಾರುಕಟ್ಟೆ ಸಮಿತಿಯಲ್ಲಿ ಜರುಗಿವೆ ಎನ್ನಲಾದ ಅವ್ಯವಹಾರಗಳಿಗೆ ಸಂಬಂಧಿಸಿದಂತೆ ಪ್ರಾರಂಭಿಸಲಾದ ಶಿಸ್ತು ನಡವಳಿಗಳನ್ನು ಕೈಬಿಟ್ಟು ಸದರಿಯವರನ್ನು ದೋಷಮುಕ್ತರು ಎಂದು ಘೋಷಿಸಲಾಗಿದೆ.

ಮೇಲೆ ಕ್ರಮಾಂಕ (2)ರಲ್ಲಿ ಓದಲಾದಂತೆ ಮಾನ್ಯ ಕರ್ನಾಟಕ ಆಡಳಿತ ನ್ಯಾಯಮಂಡಳಿಯು ಅರ್ಜಿ ಸಂಖ್ಯೆ: 1513/2003 ರಲ್ಲಿ ದಿನಾಂಕ:15.12.2003ರಂದು ತೀರ್ಪು ನೀಡುತ್ತಾ ಶ್ರೀ ಶರಶ್ಚಂದ್ರ ರಾನಡೆ ಇವರಿಗೆ ಸದರಿಯವರಿಗಿಂತ ಜೇಷ್ಠತೆಯಲ್ಲಿ ಕಿರಿಯರಾದ ಅಧಿಕಾರಿಗೆ ಅಪರ ನಿರ್ದೇಶಕರ ಪದವೃಂದಕ್ಕೆ ಪದೋನ್ನತಿ ನೀಡಲಾದ ದಿನಾಂಕದಿಂದ ಪೂರ್ವಾನ್ವಯವಾಗಿ ಅನ್ವಯಿಸುವಂತೆ ಪದೋನ್ನತಿ ನೀಡಲು ಆದೇಶಿಸಿದೆ. ದಿನಾಂಕ: 19.01.2004ರಂದು ಜರುಗಿದ ಇಲಾಖಾ ಪದೋನ್ನತಿ ಸಮಿತಿ ಸಭೆಯ ನಡವಳಿಗಳ ಪ್ರಕಾರ ಶ್ರೀ ಶರಶ್ಚಂದ್ರ ರಾನಡೆ ರವರಿಗೆ ದಿನಾಂಕ:2.1.2003ರಿಂದ ಪೂರ್ವಾನ್ವಯವಾಗಿ ಅನ್ವಯಿಸುವಂತೆ ಅಪರ ನಿರ್ದೇಶಕರ ಹುದ್ದೆಗೆ ಪದೋನ್ನತಿ ನೀಡಲು ತೀರ್ಮಾನಿಸಲಾಗಿದೆ.

ಮೇಲೆ ಕ್ರಮಾಂಕ (3)ರಲ್ಲಿ ಓದಲಾದ ಪತ್ರಗಳಲ್ಲಿ ನಿರ್ದೇಶಕರು, ಕೃಷಿ ಮಾರಾಟ ಇಲಾಖೆ ರವರು ಗಂಗಾವತಿ ಕೃಷಿ ಉತ್ಪನ್ನ ಮಾರುಕಟ್ಟೆ ಸಮಿತಿಗೆ ಪ್ರಸ್ತುತ ಮಂಜೂರಾಗಿರುವ ಜಂಟಿ ನಿರ್ದೇಶಕರ ಪದವೃಂದದ ಕಾರ್ಯದರ್ಶಿ ಹುದ್ದೆಯನ್ನು ಅಪರ ನಿರ್ದೇಶಕರ ಪದವೃಂದಕ್ಕೆ ಉನ್ನತೀಕರಿಸುವ ಬಗ್ಗೆ ಸರ್ಕಾರಕ್ಕೆ ಪ್ರಸ್ತಾವನೆ ಸಲ್ಲಿಸಿರುತ್ತಾರೆ.

ನಿರ್ದೇಶಕರು, ಕೃಷಿ ಮಾರಾಟ ಇಲಾಖೆ, ಬೆಂಗಳೂರು ಇವರ ದಿನಾಂಕ: 5.2.2004, 9.2.2004 ಮತ್ತು 25.2.2004ರ ಪ್ರಸ್ತಾವನೆಗಳನ್ನು ಸಮಗ್ರವಾಗಿ ಪರಿಶೀಲಿಸಲಾಗಿದೆ. ಗಂಗಾವತಿ ಕೃಷಿ ಮಾರುಕಟ್ಟೆಯನ್ನು 1953ರಂದು ಸ್ಥಾಪಿಸಲಾಗಿದ್ದು, ನಿರಂತರವಾಗಿ ಹೆಚ್ಚಿನ ಆದಾಯವನ್ನು ಪಡೆಯುತ್ತಿದೆ. ಸದರೀ ಮಾರುಕಟ್ಟೆ ಸಮಿತಿಯು 2000-2001ರಲ್ಲಿ 537.64, 2001-2002ರಲ್ಲಿ 560.55 ಮತ್ತು 2002-2003ರಲ್ಲಿ 640.21 ಲಕ್ಷ ರೂಪಾಯಿಗಳ ಒಟ್ಟು ಆದಾಯವನ್ನು ಹೊಂದಿರುತ್ತದೆ. ಜನವರಿ 2004ರ ವರೆವಿಗೆ ರೂ. 71,06,832=74 ಗಳ ಒಟ್ಟು ಆದಾಯ ಹೊಂದಿದ್ದು ಏಪ್ರಿಲ್ 2003 ರಿಂದ ಜನವರಿ 2004ರವರೆವಿಗೆ ರೂ.2,54,36,720=24 ಗಳ ಒಟ್ಟು ಉಳಿತಾಯವನ್ನು ಸಾಧಿಸಿದೆ. ಸದರಿ ಸಮಿತಿಯ ವಹಿವಾಟನ್ನು ಸಮರ್ಥವಾಗಿ ನಿರ್ವಹಿಸಲು ಅನುಕೂಲವಾಗುವಂತೆ ಪ್ರಸ್ತುತ ಸಮಿತಿಗೆ ಮಂಜೂರಾಗಿರುವ ಜಂಟಿ ನಿರ್ದೇಶಕರ ಪದವೃಂದದ ಹುದ್ದೆಯನ್ನು ಅಪರ ನಿರ್ದೇಶಕರ ಪದವೃಂದಕ್ಕೆ ಉನ್ನತೀಕರಿಸುವುದು ಸೂಕ್ತವೆಂದು ಸರ್ಕಾರವು

ಪರಿಗಣಿಸಿದೆ. ಕರ್ನಾಟಕ ಕೃಷಿ ಉತ್ಪನ್ನ ಮಾರಾಟ (ನಿಯಂತ್ರಣ) ಕಾಯ್ದೆ 1966ರ ಕಲಂ 91 ರನ್ವಯ ರಾಜ್ಯದಲ್ಲಿನ ಕೃಷಿ ಉತ್ಪನ್ನ ಮಾರುಕಟ್ಟೆ ಸಮಿತಿಗಳು ಪ್ರತಿ ತಿಂಗಳು ಸಮಿತಿಯ ಆದಾಯದಲ್ಲಿ ನಿರ್ದೇಶಕರು, ಕೃಷಿ ಮಾರಾಟ ಇಲಾಖೆ, ಬೆಂಗಳೂರು ಇವರು ನಿಗದಿಪಡಿಸಿದ ಪ್ರಮಾಣದಲ್ಲಿ ರಾಜ್ಯ ಸಂಚಿತ ನಿಧಿಗೆ ವಂತಿಗೆಯನ್ನು ಸಿಬ್ಬಂದಿ ಹಾಗೂ ಇತರೆ ವೆಚ್ಚಗಳಿಗಾಗಿ ಮಾರುಕಟ್ಟೆ ಸಮಿತಿಗಳು ಸರ್ಕಾರಕ್ಕೆ ತುಂಬುತ್ತಿರುವುದರಿಂದ ಈ ರೀತಿ ಕಾರ್ಯದರ್ಶಿ, ಕೃಷಿ ಉತ್ಪನ್ನ ಮಾರುಕಟ್ಟೆ ಸಮಿತಿ, ಗಂಗಾವತಿ ಇದನ್ನು ಅಪರ ನಿರ್ದೇಶಕರ ಪದವೃಂದಕ್ಕೆ ಉನ್ನತೀಕರಿಸುವ ಮೂಲಕ ಸರ್ಕಾರಕ್ಕೆ ಯಾವುದೇ ರೀತಿಯ ಆರ್ಥಿಕ ಹೊರೆ ಬೀಳುವುದಿಲ್ಲ. ಪ್ರಸ್ತುತ ಕೃಷಿ ಮಾರಾಟ ಇಲಾಖೆಯಲ್ಲಿ ಅಪರ ನಿರ್ದೇಶಕರ ಪದವೃಂದಕ್ಕೆ ಕೇವಲ ಒಂದು ಹುದ್ದೆ ಮಂಜೂರಾಗಿದ್ದು, ಮೇಲೆ ಕ್ರಮಾಂಕ (2) ರಲ್ಲಿ ಓದಲಾದ ದಿನಾಂಕ:15.12.2003ರ ಮಾನ್ಯ ಕರ್ನಾಟಕ ಆಡಳಿತ ನ್ಯಾಯಮಂಡಳಿಯ ಆದೇಶಾನುಸಾರ ಅರ್ಜಿದಾರ ಶ್ರೀ ಶರಶ್ಚಂದ್ರ ರಾನಡೆ, ಜಂಟಿ ನಿರ್ದೇಶಕರು ಇವರಿಗೆ ಅಪರ ನಿರ್ದೇಶಕರ ಹುದ್ದೆಗೆ ಪದೋನ್ನತಿ ನೀಡುವಲ್ಲಿ ಈಗಾಗಲೇ ಕಾಲ ವಿಳಂಬವಾಗಿದ್ದು ನ್ಯಾಯಮಂಡಳಿ ನಿಂದನೆಯಾಗುವ ಸಾಧ್ಯತೆ ಇರುವ ಪ್ರಯುಕ್ತ, ಮಾನ್ಯ ನ್ಯಾಯಮಂಡಳಿಯ ಆದೇಶವನ್ನು ಅನುಷ್ಠಾನಗೊಳಿಸಲು ಸದರಿ ಹುದ್ದೆಯನ್ನು ಉನ್ನತೀಕರಿಸುವುದು ಸಾರ್ವಜನಿಕ ಮತ್ತು ಆಡಳಿತಾತ್ಮಕ ಹಿತದೃಷ್ಟಿಯಿಂದ ಉನ್ನತೀಕರಿಸುವುದು ಅವಶ್ಯಕವೆಂದು ಸರ್ಕಾರವು ತೀರ್ಮಾನಿಸಿದೆ. ಆದುದರಿಂದ ಈ ಆದೇಶ

**ಸರ್ಕಾರಿ ಆದೇಶ ಸಂಖ್ಯೆ: ಸಇ 360 ಮಾಇಸೇ 2003(1), ಬೆಂಗಳೂರು, ದಿನಾಂಕ: 27ನೇ ಫೆಬ್ರವರಿ 2004**

ಪ್ರಸ್ತಾವನೆಯಲ್ಲಿ ವಿವರಿಸಿದ ಕಾರಣಗಳಿಂದಾಗಿ, ಕೃಷಿ ಉತ್ಪನ್ನ ಮಾರುಕಟ್ಟೆ ಸಮಿತಿ, ಗಂಗಾವತಿ ಇದಕ್ಕೆ ಮಂಜೂರಾಗಿರುವ ಜಂಟಿ ನಿರ್ದೇಶಕರ ಪದವೃಂದದ (ವೇತನ ಶ್ರೇಣಿ ರೂ. 10620-14960) ಕಾರ್ಯದರ್ಶಿ ಹುದ್ದೆಯನ್ನು ತಾತ್ಕಾಲಿಕವಾಗಿ ಅಪರ ನಿರ್ದೇಶಕರ ಪದವೃಂದಕ್ಕೆ (ವೇತನ ಶ್ರೇಣಿ ರೂ. 11520-15840) ಉನ್ನತೀಕರಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 292

**ಬಿ.ಎಸ್. ಜಾಪಾಲಿ**

ಸರ್ಕಾರದ ಅಧೀನ ಕಾರ್ಯದರ್ಶಿ, ಸಹಕಾರ ಇಲಾಖೆ.

**ಅರಣ್ಯ, ಪರಿಸರ ಮತ್ತು ಜೀವಿಶಾಸ್ತ್ರ ಸಚಿವಾಲಯ**

**ವಿಷಯ:** ದಿನಾಂಕ: 24.10.1980 ಕ್ಕಿಂತ ಪೂರ್ವದ ಅರಣ್ಯ ಭೂಮಿಯಲ್ಲಿನ ಅತಿಕ್ರಮಣಗಳನ್ನು ಸಕ್ರಮಗೊಳಿಸುವ ಬಗ್ಗೆ ಪರಿಶೀಲಿಸಲು ರಚಿಸಿರುವ ತಾಲ್ಲೂಕು ಮಟ್ಟದ ಸಮಿತಿಗಳಿಗೆ ಅಧಿಕಾರೇತರ ಸದಸ್ಯರನ್ನು ನಾಮ ನಿರ್ದೇಶನ ಮಾಡುವ ಬಗ್ಗೆ.

**ಓದಲಾಗಿದೆ:**
1. ಸರ್ಕಾರಿ ಆದೇಶ ಸಂಖ್ಯೆ: ಅಪಜೀ 361 ಎಫ್‌ಜಿಎಲ್ 2002 (ಭಾಗ), ದಿನಾಂಕ: 1.12.2003.
2. ಸರ್ಕಾರದ ಆದೇಶ ಸಂಖ್ಯೆ: ಅಪಜೀ 359 ಎಫ್‌ಜಿಎಲ್ 2003, ದಿನಾಂಕ: 6-1-2004.
3. ಮುಖ್ಯ ಮಂತ್ರಿಯವರ ಸಚಿವಾಲಯದ ಟಿಪ್ಪಣಿ ಸಂಖ್ಯೆ: ಸಿಎಂಪಿಎಸ್:66/2004, ದಿನಾಂಕ: 22-2-2004.

**ಪ್ರಸ್ತಾವನೆ:**

ಮೇಲೆ ಓದಲಾದ (1)ರ ಸರ್ಕಾರಿ ಆದೇಶದಲ್ಲಿ ದಿನಾಂಕ: 24.10.1980ರ ಪೂರ್ವದ ಅರಣ್ಯ ಭೂಮಿಯ ಅತಿಕ್ರಮಣಗಳನ್ನು ಸಕ್ರಮಗೊಳಿಸುವ ಬಗ್ಗೆ ಪರಿಶೀಲಿಸಲು ಪ್ರತಿ ತಾಲ್ಲೂಕಿಗೆ ಒಂದರಂತೆ ತಾಲ್ಲೂಕು ಮಟ್ಟದ ಸಮಿತಿಗಳನ್ನು ರಚಿಸಲಾಗಿದೆ. ಮೇಲೆ ಓದಲಾದ (2) ಸರ್ಕಾರಿ ಆದೇಶದಲ್ಲಿ ಶಿವಮೊಗ್ಗ ತಾಲ್ಲೂಕು ಮಟ್ಟದ ಅಧ್ಯಕ್ಷರು ಮತ್ತು ಸದಸ್ಯರನ್ನು ನಾಮನಿರ್ದೇಶನ ಮಾಡಲಾಗಿತ್ತು.

ಮೇಲೆ ಓದಲಾದ ಟಿಪ್ಪಣಿ ಸಂಖ್ಯೆ: ಸಿಎಂಪಿಎಸ್:66/2004, ದಿನಾಂಕ:22.2.2004 ರಲ್ಲಿ ಈ ಕೆಳಕಂಡವರನ್ನು ಅಧ್ಯಕ್ಷರು ಮತ್ತು ಸದಸ್ಯರನ್ನಾಗಿ ನಾಮ ನಿರ್ದೇಶನ ಮಾಡಲು ಆದೇಶಿಸಲಾಗಿದೆ.

| | | |
|---|---|---|
| 1. | ಶ್ರೀ ಗಣಪತಿ ತಂದೆ ಗಿಡ್ಡಾನಾಯಕ್, ವಕೀಲರು, ಹೊಸಮನಿ, ಶಿವಮೊಗ್ಗ. | ಅಧ್ಯಕ್ಷರು |
| 2. | ಶ್ರೀ ಗುಲಫಮ್ ಗಂಡ ಅಬ್ದುಲ್ ವಾಜೀದ್, ಕೋಟೆ ಹಾರ್ನಳ್ಳಿ. | ಸದಸ್ಯರು |
| 3. | ಚಂದ್ರಪ್ಪ ತಂದೆ ಸಿದ್ದಪ್ಪ ತ್ಯಾಜುವಳ್ಳಿ, ಶಿವಮೊಗ್ಗ, ತಾಲ್ಲೂಕು. | ಸದಸ್ಯರು |
| 4. | ಮಾರಪ್ಪ, ಶಿವಮೊಗ್ಗ ನಗರ. | ಸದಸ್ಯರು |

ಅದರಂತೆ ಅಧಿಕಾರೇತರ ಸದಸ್ಯರ ನಾಮ ನಿರ್ದೇಶನವನ್ನು ಮಾಡಲು ಉದ್ದೇಶಿಸಲಾಗಿದೆ.

**ಸರ್ಕಾರಿ ಆದೇಶ ಸಂಖ್ಯೆ: ಅಪಜೀ 22 ಎಫ್‌ಜಿಎಲ್ 2004, ಬೆಂಗಳೂರು, ದಿನಾಂಕ: 28ನೇ ಫೆಬ್ರವರಿ 2004**

ದಿನಾಂಕ: 1.12.2003 ರಲ್ಲಿ ರಚಿಸಲಾದ ತಾಲ್ಲೂಕು ಮಟ್ಟದ ಸಮಿತಿಗಳಲ್ಲಿ ಶಿವಮೊಗ್ಗ ತಾಲ್ಲೂಕಿಗೆ ಸಂಬಂಧಿಸಿದಂತೆ, ಸರ್ಕಾರದ ಆದೇಶ ಸಂಖ್ಯೆ: ಅಪಜೀ 359 ಎಫ್‌ಜಿಎಲ್ 2003, ದಿನಾಂಕ: 6.1.2004 ರಲ್ಲಿ ಶಿವಮೊಗ್ಗ ತಾಲ್ಲೂಕಿಗೆ ಸಂಬಂಧಿಸಿದಂತೆ ಅಧ್ಯಕ್ಷರು ಮತ್ತು ಅಧಿಕಾರೇತರ ಸದಸ್ಯರ ನೇಮಕ ಮಾಡಿರುವುದನ್ನು ಈ ಮೂಲಕ ರದ್ದುಪಡಿಸಲಾಗಿದೆ ಮತ್ತು ಸದರಿ ಸಮಿತಿಗೆ ಕೆಳಕಂಡ ಅಧ್ಯಕ್ಷರು ಮತ್ತು ಅಧಿಕಾರೇತರ ಸದಸ್ಯರುಗಳನ್ನು ತಕ್ಷಣದಿಂದ ಜಾರಿಗೆ ಬರುವಂತೆ ಮತ್ತು ಮುಂದಿನ ಆದೇಶದವರೆವಿಗೂ ನಾಮ ನಿರ್ದೇಶನ ಮಾಡಿದೆ.

| | | |
|---|---|---|
| 1. | ಶ್ರೀ ಗಣಪತಿ ತಂದೆ ಗಿಡ್ಡಾನಾಯಕ್, ವಕೀಲರು, ಹೊಸಮನಿ, ಶಿವಮೊಗ್ಗ. | ಅಧ್ಯಕ್ಷರು |
| 2. | ಶ್ರೀ ಗುಲಫಮ್ ಗಂಡ ಅಬ್ದುಲ್ ವಾಜೀದ್, ಕೋಟೆ ಹಾರ್ನಳ್ಳಿ. | ಸದಸ್ಯರು |
| 3. | ಚಂದ್ರಪ್ಪ ತಂದೆ ಸಿದ್ದಪ್ಪ ತ್ಯಾಜುವಳ್ಳಿ, ಶಿವಮೊಗ್ಗ, ತಾಲ್ಲೂಕು. | ಸದಸ್ಯರು |
| 4. | ಮಾರಪ್ಪ, ಶಿವಮೊಗ್ಗ ನಗರ. | ಸದಸ್ಯರು |

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 293

**ಎಸ್.ಆರ್ ವತ್ಸಲ**

ಸರ್ಕಾರದ ಅಧೀನ ಕಾರ್ಯದರ್ಶಿ, ಅರಣ್ಯ, ಪರಿಸರ ಮತ್ತು ಜೀವಿಶಾಸ್ತ್ರ ಇಲಾಖೆ.

## ENERGY SECRETARIAT

**Sub:** Appointment of Consultants for undertaking Institutional Strengthening of KPTCL and Power Market Development Consultancy - reg.

**Read:** 1. GO No. DE 17 PSR 99 (Part III) Vol.II, Bangalore Dated 31.3.2001.
2. GO No. DE 50 PSR 2000 (Vol. 3), Bangalore Dated 21.7.2003.

**PREAMBLE:**

Government of Karnataka vide GO read at (1) above appointed M/s Pricewaterhouse Coopers Development Associates Ltd, U.K. for undertaking the Institutional Strengthening of KPTCL and Power Market Development Consultancy (ISP Consultancy). The period of assignment was Twenty Four (24) months from the date of agreement or such other period as the parties might agree in writing as per the Contract.

The Contract entered in to with M/s Pricewaterhouse Development Associates Ltd. U.K. expired on 28.2.2003. In the 15th Steering Committee Meeting held on 20.5.2003, it was proposed to extend the contract of M/s Pricewaterhouse Coopers Development Associates, U.K. Consultants for Institutional Strengthening of KPTCL and Power Market Development Associates for a further period of Six (6) months i.e. upto 31.8.2003 to extend support to Escoms without any extra cost vide GO read at (2) above.

Now the contract has been further extended for a further period of Four (4) months i.e. upto 31.12.2003 without any extra cost as to ensure completion of the tasks assigned to the Consultants. Hence this Order.

**Government Order No. DE 27 PSR 2003 (Vol.3), Bangalore, Dated: 5th March 2004**

In the circumstances explained in the Preamble, Government are pleased to accord approval for arranging payment of fee towards consultancy for services from M/s Pricewaterhouse Coopers Development Associates Ltd., U.K. subject to the following:

(1) To extend the contract agreement upto 31.12.2003 without any extra cost to the Government.

(2) To release payments to ISP consultants during 2003-04 as per the terms and conditions mentioned in the contract agreement signed on 1.3.2001 and as amended from time to time.

(3) The Special Secretary to Government (Power Reforms), is authorized to sign all the documents, draw and disburse payments to the consultants as per the terms and conditions of the contract agreement dated 1.3.2001 and as amended from time to time based on the payee's receipt submitted by the Consultants.

(4) The expenditure on this account is to be met out of the Budget provision of Rs. 20.14 Crores made for the year 2003-04 under the Head of Account: 2801-80-101-1-80 (Plan)-TA Loan for Power Sector Reforms.

By Order and in the name of the Governor of Karnataka,

P.R. 294 **K.L. JAYARAM**

Under Secretary to Government, Energy Department.

**Sub:** Transfer of 6.25 M.W. Wind Power Capacity in favour of M/s MSPL Limited, - orders relating to.

**Read:** 1. Government order No : DE 325 NCE 2002, dated : 21.12.2002.
2. Letter No : KRED / 08 / EGE / 2004 / 399, dated : 03.03.2004 received from the Managing Director, Karnataka Renewable Energy Development Limited, Bangalore.

**PREAMBLE** :

In the Government letter dated : 21.12.2002 read at (1) above, sanction has been accorded for implementation of 20 M.W. capacity Wind Power Project at Chitradurga District to M/s Suzlon Energy Limited.

(2) Now, the Managing Director, Karnataka Renewable Energy Development Limited, Bangalore, in his letter dated : 03.03.2004 read at (2) above, has recommended to the Government for transfer of 6.25 M.W. Wind Power capacity in favour of M/s MSPL Limited, at survey No : 33 of Jogimatti Village, Chitradurga district, from out of the sanctioned 20 M.W. capacity of M/s Suzlon Energy Limited.

(3) The proposal has been examined and pass the following order :

**Government Order No : DE 79 NCE 2004, Bangalore, Dated : 5th March 2004**

(4) Government are pleased to accord sanction for transfer of 6.25 M.W. Wind Power capacity in favour of M/s MSPL Limited, in the schedule indicated below, from out of 20 M.W. capacity of M/s Suzlon Energy Limited, allotted in the Government order dated : 21.12.2002.

**SCHEDULE –I**

| Taluk / District | Village Name | Survey Number | Extent of area (Acres/Gunta) |
|---|---|---|---|
| Chitradurga | Jogimatti | 33 | 4.73 |

(5) The terms and conditions of the original allotment made in the Government order read at (1) above are **IPSOFACTO** applicable.

By Order and in the name of the Governor of Karnataka,

P.R. 295

**K.L. JAYARAM**

Under Secretary to Government, Energy Department.

**ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಸಚಿವಾಲಯ**

**ವಿಷಯ:** ಶ್ರೀ ಕೆ. ಈಶ್ವರ್ ಭಟ್, ನಿವೃತ್ತ ಜಿಲ್ಲಾ ಮತ್ತು ಸೆಷನ್ಸ್ ನ್ಯಾಯಾಧೀಶರಿಗೆ ವಿಚಾರಣಾ ವರದಿ ಸಲ್ಲಿಸಿದ್ದಕ್ಕಾಗಿ ಗೌರವಧನ ಹಾಗೂ ವಾಹನ ಭತ್ಯೆ ಮಂಜೂರು ಮಾಡುವ ಬಗ್ಗೆ.

**ಓದಲಾಗಿದೆ:**
1. ಸರ್ಕಾರದ ಆದೇಶ ಸಂಖ್ಯೆ: ಸಿಆಸುಇ 26 ಎಸ್.ಇ.ಎನ್ 03 ದಿ.21.10.03.
2. ಶ್ರೀ ಈಶ್ವರ್ ಭಟ್, ನಿವೃತ್ತ ಜಿಲ್ಲಾ ಮತ್ತು ಸೆಷನ್ಸ್ ನ್ಯಾಯಾಧೀಶರ ವರದಿ ದಿನಾಂಕ 23.12.2003.

**ಪ್ರಸ್ತಾವನೆ:**

ಶ್ರೀ ಜೆ. ಶ್ರೀನಿವಾಸನ್, ಅಧೀನ ಕಾರ್ಯದರ್ಶಿ, ಕರ್ನಾಟಕ ಸರ್ಕಾರದ ಸಚಿವಾಲಯ ಅವರ ವಿರುದ್ಧ ಇಲಾಖಾ ವಿಚಾರಣೆ ನಡೆಸುವ ಸಲುವಾಗಿ ಮೇಲೆ (1) ರಲ್ಲಿ ಓದಲಾದ ದಿನಾಂಕ 21.10.2003ರ ಸರ್ಕಾರಿ ಆದೇಶದಲ್ಲಿ ಶ್ರೀ ಕೆ. ಈಶ್ವರ್ ಭಟ್, ನಿವೃತ್ತ ನ್ಯಾಯಾಧೀಶರು ಇವರನ್ನು ವಿಚಾರಣಾಧಿಕಾರಿಯನ್ನಾಗಿ ನೇಮಿಸಲಾಗಿತ್ತು. ವಿಚಾರಣೆ ನಡೆಸಿದ ವಿಚಾರಣಾಧಿಕಾರಿಗಳು ಮೇಲೆ (2)ರಲ್ಲಿ ಓದಲಾದ ದಿನಾಂಕ 23.12.2003 ರ ವಿಚಾರಣಾ ವರದಿಯನ್ನು ಸಲ್ಲಿಸಿರುತ್ತಾರೆ. ಈ ಸಂಬಂಧ ಅವರಿಗೆ ಗೌರವಧನ ಹಾಗೂ ವಾಹನಭತ್ಯೆ ಮಂಜೂರು ಮಾಡಲು ಸರ್ಕಾರವು ಈ ಮುಂದಿನಂತೆ ಆದೇಶಿಸುತ್ತದೆ.

**ಆದೇಶ ಸಂಖ್ಯೆ: ಸಿಆಸುಇ 26 ಎಸ್.ಇ.ಎನ್ 2003, ಬೆಂಗಳೂರು, ದಿನಾಂಕ: 1ನೇ ಮಾರ್ಚ್ 2004**

ಸರ್ಕಾರವು ಶ್ರೀ ಕೆ. ಈಶ್ವರ್ ಭಟ್, ನಿವೃತ್ತ ನ್ಯಾಯಾಧೀಶರು ಇವರು ವಿಚಾರಣಾ ವರದಿ ಸಲ್ಲಿಸಿದ ಕಾರಣ ಸರ್ಕಾರಿ ಆದೇಶ ಸಂಖ್ಯೆ: ಸಿಆಸುಇ 3 ಸೇಇವಿ 96 ದಿನಾಂಕ: 24.4.1998 ರನ್ವಯ ರೂ.5,000/- (ಐದು ಸಾವಿರ ರೂಪಾಯಿಗಳು ಮಾತ್ರ) ಗೌರವ ಧನ ಹಾಗೂ ಸರ್ಕಾರಿ ಆದೇಶ ಸಂಖ್ಯೆ: ಸಿಆಸುಇ 45 ಸೇಇವಿ 2001 ದಿನಾಂಕ 4.3.2002 ರನ್ವಯ ರೂ.1000/- (ಒಂದು ಸಾವಿರ ರೂಪಾಯಿಗಳು ಮಾತ್ರ) ವಾಹನ ಭತ್ಯೆಯನ್ನು ಇವರಿಗೆ ಪಾವತಿ ಮಾಡಬೇಕೆಂದು ಈ ಮೂಲಕ ಆದೇಶಿಸುತ್ತದೆ.

ಈ ಬಗೆಗಿನ ವೆಚ್ಚವನ್ನು ಆಯವ್ಯಯದ ಲೆಕ್ಕ ಶೀರ್ಷಿಕೆ "2052 ಸಚಿವಾಲಯ ಸಾಮಾನ್ಯ ಸೇವೆಗಳು-090--ಸಚಿವಾಲಯ-01, ಕರ್ನಾಟಕ ಸರ್ಕಾರದ ಸಚಿವಾಲಯ-014 ಇತರೆ ಭತ್ಯೆಗಳು" ರಲ್ಲಿ ಭರಿಸುವುದು.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 296

**ಕೆ. ರಘುರಾಮ್ ಭಂಡಾರಿ**

ಸರ್ಕಾರದ ಅಧೀನ ಕಾರ್ಯದರ್ಶಿ, ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಇಲಾಖೆ (ಸೇವೆಗಳು-3)

**ವಿಷಯ:** ಪ್ರಧಾನ ಕಾರ್ಯದರ್ಶಿ, ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಇಲಾಖೆ (ಆಡಳಿತ ಸುಧಾರಣೆ, ತರಬೇತಿ ಮತ್ತು ರಾಜಕೀಯ ವಿಶ್ರಾಂತಿ ವೇತನ) ಹುದ್ದೆ ಹಾಗೂ ಪೂರಕ ಸಿಬ್ಬಂದಿ ಹುದ್ದೆಗಳನ್ನು ದಿನಾಂಕ: 1.4.2004 ರಿಂದ ದಿನಾಂಕ: 31.3.2005 ರವರೆಗೆ ಮುಂದುವರೆಸುವ ಬಗ್ಗೆ.

**ಓದಲಾಗಿದೆ:**
1. ಸರ್ಕಾರದ ಆದೇಶ ಸಂಖ್ಯೆ: ಸಿಆಸುಇ 18 ಸಸಿವಿ 97 ದಿನಾಂಕ: 20.6.1997.
2. ಸರ್ಕಾರದ ಆದೇಶ ಸಂಖ್ಯೆ: ಸಿಆಸುಇ 18 ಸಸಿವಿ 97 ದಿನಾಂಕ: 27.6.1997.
3. ಸರ್ಕಾರದ ಆದೇಶ ಸಂಖ್ಯೆ: ಸಿಆಸುಇ 28 ಸಸಿವಿ 98 ದಿನಾಂಕ: 3.7.1998.
4. ಸರ್ಕಾರದ ಆದೇಶ ಸಂಖ್ಯೆ: ಸಿಆಸುಇ 40 ಸಸಿವಿ 98 ದಿನಾಂಕ: 30.11.1998.
5. ಸರ್ಕಾರದ ಆದೇಶ ಸಂಖ್ಯೆ: ಸಿಆಸುಇ 264 ಎಸ್ಎಎಸ್ 98 ದಿನಾಂಕ: 10.5.1999.
6. ಸರ್ಕಾರದ ಆದೇಶ ಸಂಖ್ಯೆ: ಸಿಆಸುಇ 15 ಸಸಿವಿ 99 ದಿನಾಂಕ: 1.6.1999.
7. ಸರ್ಕಾರದ ಆದೇಶ ಸಂಖ್ಯೆ: ಸಿಆಸುಇ 15 ಸಸಿವಿ 99 ದಿನಾಂಕ: 16.2.2000.
8. ಸರ್ಕಾರದ ಆದೇಶ ಸಂಖ್ಯೆ: ಸಿಆಸುಇ 10 ಸಸಿವಿ 2001 ದಿನಾಂಕ: 22.3.2001.
9. ಸರ್ಕಾರದ ಆದೇಶ ಸಂಖ್ಯೆ: ಸಿಆಸುಇ 21 ಸಸಿವಿ 2001 ದಿನಾಂಕ: 2.5.2001.
10. ಸರ್ಕಾರದ ಆದೇಶ ಸಂಖ್ಯೆ: ಸಿಆಸುಇ 31 ಸಸಿವಿ 2002 ದಿನಾಂಕ: 23.5.2002.
11. ಸರ್ಕಾರದ ಆದೇಶ ಸಂಖ್ಯೆ: ಸಿಆಸುಇ 23 ಸಸಿವಿ 2003 ದಿನಾಂಕ: 13.3.2003.
12. ಅನಧಿಕೃತ ಟಿಪ್ಪಣಿ ಸಂಖ್ಯೆ: ಸಿಆಸುಇ 115 ಪ್ರಕಾ (ಅಸು) 2004 ದಿನಾಂಕ: 12.2.2004.

**ಪ್ರಸ್ತಾವನೆ:**

ಮೇಲೆ ಕ್ರಮ ಸಂಖ್ಯೆ (1)ರಲ್ಲಿ ಓದಲಾಗಿರುವ ಸರ್ಕಾರದ ಆದೇಶದಲ್ಲಿ ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಇಲಾಖೆಯಲ್ಲಿ ದಿನಾಂಕ: 17.6.1997ರ ಅಪರಾಹ್ನದಿಂದ ಜಾರಿಗೆ ಬರುವಂತೆ ಒಂದು ವರ್ಷದ ಅವಧಿಗೆ ಕೆಳಕಂಡ ಸಿಬ್ಬಂದಿಗಳನ್ನು ಒಳಗೊಂಡಂತೆ ಸರ್ಕಾರದ ವಿಶೇಷ ಕಾರ್ಯದರ್ಶಿ (ಆಡಳಿತ ಸುಧಾರಣೆಗಳು, ತರಬೇತಿ ಮತ್ತು ವಿಶ್ರಾಂತಿ ವೇತನಗಳು) ಹುದ್ದೆಯನ್ನು ಸೃಜಿಸಲಾಗಿದೆ.

| | | |
|---|---|---|
| 1. | ಭಾಷಾಂತರಕಾರರು | 1 ಹುದ್ದೆ |
| 2. | ಶೀಘ್ರಲಿಪಿಗಾರರು | 2 ಹುದ್ದೆಗಳು |
| 3. | ಕಿರಿಯ ಸಹಾಯಕರು | 1 ಹುದ್ದೆ |
| 4. | ದಲಾಯತ್ | 2 ಹುದ್ದೆಗಳು |

ಕ್ರಮ ಸಂಖ್ಯೆ (2) ರಲ್ಲಿ ಓದಲಾಗಿರುವ ಸೇರ್ಪಡೆಯಲ್ಲಿ ದಿನಾಂಕ: 20.6.1997ರ ಸರ್ಕಾರದ ಆದೇಶದಲ್ಲಿ ಸೃಜಿಸಿರುವ ವಿಶೇಷಾಧಿಕಾರಿ, ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಇಲಾಖೆ ಇವರ ಆಪ್ತ ಶಾಖೆಗೆ ಚಾಲಕ ಹುದ್ದೆಯೊಂದನ್ನು ಸೇರ್ಪಡೆ ಮಾಡಲಾಗಿದೆ.

ಕ್ರಮ ಸಂಖ್ಯೆ (3)ರಲ್ಲಿ ಓದಲಾಗಿರುವ ಸರ್ಕಾರದ ಆದೇಶದಲ್ಲಿ ಮೇಲ್ಕಂಡ ಹುದ್ದೆಗಳನ್ನು ದಿನಾಂಕ: 17.6.1998 ರಿಂದ ಒಂದು ವರ್ಷದ ಅವಧಿಗೆ ಮುಂದುವರೆಸಲಾಗಿದೆ.

ಕ್ರಮ ಸಂಖ್ಯೆ (4)ರಲ್ಲಿ ಓದಲಾಗಿರುವ ಸರ್ಕಾರದ ಆದೇಶದಲ್ಲಿ ವಿಶೇಷ ಕಾರ್ಯದರ್ಶಿ, ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಇಲಾಖೆ (ಆಡಳಿತ ಸುಧಾರಣೆ ಮತ್ತು ರಾಜಕೀಯ ವಿಶ್ರಾಂತಿ ವೇತನ) ಈ ಹುದ್ದೆಯನ್ನು ಸರ್ಕಾರದ ಕಾರ್ಯದರ್ಶಿ, ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಇಲಾಖೆ (ಆಡಳಿತ ಸುಧಾರಣೆ, ತರಬೇತಿ ಮತ್ತು ರಾಜಕೀಯ ವಿಶ್ರಾಂತಿ ವೇತನ) ಹುದ್ದೆ ಎಂದು ಮರುಪದನಾಮೀಕರಿಸಲಾಗಿದೆ.

ಕ್ರಮ ಸಂಖ್ಯೆ (6) (7) (8) ರಲ್ಲಿ ಓದಲಾಗಿರುವ ಸರ್ಕಾರದ ಆದೇಶಗಳಲ್ಲಿ ಸದರಿ ಹುದ್ದೆಗಳನ್ನು ದಿನಾಂಕ: 31.3.2002 ರವರೆಗೆ ಮುಂದುವರೆಸಲಾಗಿದೆ.

ಕ್ರಮ ಸಂಖ್ಯೆ (9)ರ ಸರ್ಕಾರದ ಆದೇಶದಲ್ಲಿ ಕಾರ್ಯದರ್ಶಿ, ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಇಲಾಖೆ (ಆಡಳಿತ ಸುಧಾರಣೆ, ತರಬೇತಿ ಮತ್ತು ರಾಜಕೀಯ ವಿಶ್ರಾಂತಿ ವೇತನ) ಹುದ್ದೆಯನ್ನು ದಿನಾಂಕ: 21.3.2001 ರಿಂದ ಜಾರಿಗೆ ಬರುವಂತೆ ಪ್ರಧಾನ ಕಾರ್ಯದರ್ಶಿ : ಕಾರ್ಯದರ್ಶಿ, ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಇಲಾಖೆ (ಆಡಳಿತ ಸುಧಾರಣೆ, ತರಬೇತಿ ಮತ್ತು ರಾಜಕೀಯ ವಿಶ್ರಾಂತಿ ವೇತನ) ಹುದ್ದೆ ಎಂದು ಪುನರ್ ಪದನಾಮೀಕರಿಸಲಾಗಿದೆ ಹಾಗೂ ಯಾವ ಯಾವ ಅವಧಿಗೆ ಸದರಿ ಹುದ್ದೆಯ ಪದಧಾರಕರು ಪ್ರಧಾನ ಕಾರ್ಯದರ್ಶಿ ಆಗಿರುವರೋ ಆಯಾ ಅವಧಿಗೆ ಮಾತ್ರ ಇವರ ಆಪ್ತ ಶಾಖೆಗೆ ಶಾಖಾಧಿಕಾರಿ ವೃಂದದ 1 ಆಪ್ತ ಕಾರ್ಯದರ್ಶಿ ಹುದ್ದೆಯನ್ನು ಸೃಜಿಸಲಾಗಿದೆ.

ಕ್ರಮ ಸಂಖ್ಯೆ (10) ಹಾಗೂ (11) ರಲ್ಲಿರುವ ದಿನಾಂಕ: 23.5.2002ರ ಹಾಗೂ 13.3.2003ರ ಸರ್ಕಾರಿ ಆದೇಶಗಳಲ್ಲಿ ಪ್ರಧಾನ ಕಾರ್ಯದರ್ಶಿ, ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಇಲಾಖೆ (ಆಡಳಿತ ಸುಧಾರಣೆ, ತರಬೇತಿ ಹಾಗೂ ರಾಜಕೀಯ ವಿಶ್ರಾಂತಿ ವೇತನ) ಹುದ್ದೆಯನ್ನು ಪೂರಕ ಸಿಬ್ಬಂದಿಯೊಂದಿಗೆ ದಿನಾಂಕ: 1.4.2002 ರಿಂದ 31.3.2004 ರವರೆಗೆ ತಾತ್ಕಾಲಿಕವಾಗಿ ಮುಂದುವರೆಸಲಾಗಿದೆ.

ಕ್ರಮ ಸಂಖ್ಯೆ (12)ರ ಅನಧಿಕೃತ ಟಿಪ್ಪಣಿಯಲ್ಲಿ ಪ್ರಧಾನ ಕಾರ್ಯದರ್ಶಿ, ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಇಲಾಖೆ (ಆಡಳಿತ ಸುಧಾರಣೆ, ತರಬೇತಿ ಮತ್ತು ರಾಜಕೀಯ ವಿಶ್ರಾಂತಿ ವೇತನ) ಇವರು ಪ್ರಧಾನ ಕಾರ್ಯದರ್ಶಿ, ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಇಲಾಖೆ (ಆಡಳಿತ ಸುಧಾರಣೆ, ತರಬೇತಿ ಮತ್ತು ರಾಜಕೀಯ ವಿಶ್ರಾಂತಿ ವೇತನ) ಹುದ್ದೆ ಹಾಗೂ ಪೂರಕ ಸಿಬ್ಬಂದಿ ಹುದ್ದೆಗಳ ಅವಧಿಯನ್ನು ದಿನಾಂಕ: 31.3.2004ಕ್ಕೆ ಮುಕ್ತಾಯಗೊಂಡಿರುವುದರಿಂದ, ಸದರಿ ಹುದ್ದೆಗಳನ್ನು ಪುನಃ ಒಂದು ವರ್ಷದವರೆಗೆ ಮುಂದುವರೆಸುವಂತೆ ಕೋರಿರುತ್ತಾರೆ.

ಪ್ರಸ್ತಾವನೆಯನ್ನು ಪರಿಶೀಲಿಸಿ ಕೆಳಕಂಡಂತೆ ಆದೇಶಿಸಲಾಗಿದೆ.

**ಸರ್ಕಾರದ ಆದೇಶ ಸಂಖ್ಯೆ : ಸಿಆಸುಇ 11 ಸಸಿವಿ 2004, ಬೆಂಗಳೂರು, ದಿನಾಂಕ: 28ನೇ ಫೆಬ್ರವರಿ 2004**

ಸರ್ಕಾರದ ಪ್ರಧಾನ ಕಾರ್ಯದರ್ಶಿ, ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಇಲಾಖೆ (ಆಡಳಿತ ಸುಧಾರಣೆ, ತರಬೇತಿ ಹಾಗೂ ರಾಜಕೀಯ ವಿಶ್ರಾಂತಿ ವೇತನ) ಹುದ್ದೆಯನ್ನು ಈ ಕೆಳಕಂಡ ಪೂರಕ ಸಿಬ್ಬಂದಿಯೊಂದಿಗೆ ದಿನಾಂಕ 1.4.2004 ರಿಂದ 31.3.2005 ರವರೆವಿಗೆ ತಾತ್ಕಾಲಿಕವಾಗಿ ಮುಂದುವರೆಸಲಾಗಿದೆ.

| | |
|---|---|
| ಆಪ್ತ ಕಾರ್ಯದರ್ಶಿ (ಆಪ್ತ ಕಾರ್ಯದರ್ಶಿ ಗ್ರೇಡ್-2: ಪತ್ರಾಂಕಿತ ಆಪ್ತ ಸಹಾಯಕ). | 01 |
| ಶೀಘ್ರಲಿಪಿಗಾರರು (ಪತ್ರಾಂಕಿತ ಆಪ್ತ ಸಹಾಯಕರು) ಹಿರಿಯ ಶೀಘ್ರಲಿಪಿಗಾರರು | 02 |
| ಭಾಷಾಂತರಕಾರರು (ಶಾಖಾಧಿಕಾರಿ : ಹಿರಿಯ ಸಹಾಯಕರು) | 01 |
| ಸಹಾಯಕರು (ಹಿರಿಯ ಸಹಾಯಕರು : ಸಹಾಯಕರು) | 01 |
| ವಾಹನ ಚಾಲಕರು | 01 |
| ದಲಾಯತ್ | 02 |

ಈ ಆದೇಶವನ್ನು ದಿನಾಂಕ: 10.7.1996ರ ಆದೇಶ ಸಂಖ್ಯೆ: ಎಫ್‌ಡಿ 1 ಟಿಎಫ್‌ಪಿ 96 ರನ್ವಯ ಆರ್ಥಿಕ ಸಹಮತಿಯನ್ನು ಪರಿಭಾವಿಸಿ ಮೇಲ್ಕಂಡ ಆದೇಶವನ್ನು ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 297

**ಯು.ಪಿ. ಪ್ರಭು**

ಸರ್ಕಾರದ ಅಧೀನ ಕಾರ್ಯದರ್ಶಿ, ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಇಲಾಖೆ (ಸೇವೆಗಳು-2)

**ಕಾನೂನು ಸಚಿವಾಲಯ**

**ವಿಷಯ:** 2003-04ನೇ ಸಾಲಿಗೆ ಕರ್ನಾಟಕ ರಾಜ್ಯ ಬಾರ್ ಕೌನ್ಸಿಲ್ ಬೆಂಗಳೂರು, ಇವರಿಗೆ ರೂ.9.80 ಲಕ್ಷ ಅನುದಾನ ಮಂಜೂರಾತಿ: ಬಿಡುಗಡೆ ಮಾಡುವ ಬಗ್ಗೆ.

**ಓದಲಾಗಿದೆ:** 1. ಸರ್ಕಾರಿ ಅಧಿಸೂಚನೆ ಸಂಖ್ಯೆ: ಲಾ 210 ಎಲ್‌ಸಿಎಲ್ 02, ದಿನಾಂಕ 10.7.2003.

2. ಅಸಿಸ್ಟೆಂಟ್ ರಿಜಿಸ್ಟ್ರಾರ್, ಕರ್ನಾಟಕ ಉಚ್ಚ ನ್ಯಾಯಾಲಯ, ಬೆಂಗಳೂರು ಇವರ ಪತ್ರ ಸಂಖ್ಯೆ: ಹೆಚ್‌ಸಿಬಿ:230:83 ದಿನಾಂಕ 01.10.2003.

**ಪ್ರಸ್ತಾವನೆ:**

ಮೇಲೆ ಓದಲಾದ ಕ್ರಮಾಂಕ(1) ದಿನಾಂಕ 10.7.03ರ ಅಧಿಸೂಚನೆ ರನ್ವಯ ವಕೀಲರುಗಳ ಸಂಘಗಳಿಗೆ ಸಹಾಯಾನುದಾನ ನೀಡುವ ಬಗ್ಗೆ ಗ್ರಾಂಟ್-ಇನ್-ಏಡ್ ರೂಲ್ಸ್‌ಗೆ ಅಮೆಂಡ್‌ಮೆಂಟ್ ತರಲಾಗಿದ್ದು, ಈ ಬಗ್ಗೆ ರಾಜ್ಯ ಬಾರ್ ಕೌನ್ಸಿಲ್‌ಗೆ ಪೀಠೋಪಕರಣ ಮತ್ತು ಕಾನೂನು ಪುಸ್ತಕಗಳನ್ನು ಖರೀದಿಸಲು ನಿಗದಿಗೊಳಿಸಿದ್ದ ರೂ.1.00 ಲಕ್ಷ ಅನುದಾನವನ್ನು ತೆಗೆದು ಹಾಕಲಾಗಿದೆ ಮತ್ತು ಈ ಕೆಳಕಂಡ ಉದ್ದೇಶಗಳಿಗಾಗಿ ಮಾತ್ರ ಲೆಕ್ಕ ಶೀರ್ಷಿಕೆ 2014-00-800-9-00-500 (ಯೋಜನೇತರ) ಅಡಿಯಲ್ಲಿ ರೂ. 9.80 ಲಕ್ಷಗಳ ಅನುದಾನವನ್ನು ಆಯವ್ಯಯದಲ್ಲಿ ಮೀಸಲಿಡಲಾಗಿದೆ.

1) ಕಿರಿಯ ವಕೀಲರುಗಳಿಗೆ ಕಾನೂನು ಕಮ್ಮಟ: ಕಾರ್ಯಗಾರ ಹಾಗೂ ವಕೀಲರುಗಳಿಗೆ ತರಬೇತಿ ನೀಡಲು

2) ಸೆಮಿನಾರ್ ಮತ್ತು ಕಾನೂನು ಉಪನ್ಯಾಸಗಳನ್ನು ನೀಡಲು,

ಮೇಲೆ ಓದಲಾದ ಕ್ರಮಾಂಕ (2) ದಿನಾಂಕ 1.10.2003ರ ಪತ್ರದಲ್ಲಿ ಅಸಿಸ್ಟೆಂಟ್ ರಿಜಿಸ್ಟ್ರಾರ್, ಕರ್ನಾಟಕ ಉಚ್ಚ ನ್ಯಾಯಾಲಯ, ಬೆಂಗಳೂರು ಇವರು ಕೆಳಕಂಡ ಉದ್ದೇಶಗಳಿಗೆ ಪ್ರತ್ಯೇಕ ಲೆಕ್ಕ ಶೀರ್ಷಿಕೆಯಡಿ ರೂ.10.00 ಲಕ್ಷ ಅನುದಾನವನ್ನು ರಾಜ್ಯ ಬಾರ್ ಕೌನ್ಸಿಲ್‌ಗೆ ಒದಗಿಸುವಂತೆ ಕೋರಿರುತ್ತಾರೆ.

1) ಕಿರಿಯ ವಕೀಲರುಗಳಿಗೆ ಕಾನೂನು ಕಮ್ಮಟ: ಕಾರ್ಯಗಾರ ಹಾಗೂ ವಕೀಲರುಗಳಿಗೆ ತರಬೇತಿ ನೀಡಲು

2) ಸೆಮಿನಾರ್ ಮತ್ತು ಕಾನೂನು ಉಪನ್ಯಾಸಗಳನ್ನು ನೀಡಲು,

ಸರ್ಕಾರವು ಪ್ರಸ್ತಾವನೆಯನ್ನು ಕೂಲಂಕುಷವಾಗಿ ಪರಿಶೀಲಿಸಿ ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರಿ ಆದೇಶ ಸಂಖ್ಯೆ: ಲಾ 116 ಎಲ್‌ಸಿಎಲ್ 03, ಬೆಂಗಳೂರು, ದಿನಾಂಕ: 10ನೇ ಫೆಬ್ರವರಿ 2004**

ಪ್ರಸ್ತಾವನೆಯಲ್ಲಿ ವಿವರಿಸಿರುವ ಹಿನ್ನೆಲೆಯಲ್ಲಿ ಕರ್ನಾಟಕ ರಾಜ್ಯ ಬಾರ್ ಕೌನ್ಸಿಲ್‌ಗೆ ಪ್ರಸಕ್ತ ಸಾಲಿನ ಆಯವ್ಯಯದಲ್ಲಿ ಒದಗಿಸಲಾದ ರೂ. 9.80 ಲಕ್ಷಗಳ (ಒಂಬತ್ತು ಲಕ್ಷದ ಎಂಬತ್ತು ಸಾವಿರ ರೂಪಾಯಿಗಳನ್ನು ಮಾತ್ರ) ಅನುದಾನವನ್ನು ಬಿಡುಗಡೆ ಮಾಡಿದೆ.

ಸದರಿ ಮೊತ್ತವನ್ನು ಮೇಲಿನ ಉದ್ದೇಶಗಳಿಗಾಗಿ ಮಾತ್ರ ವಿನಿಯೋಗಿಸತಕ್ಕದ್ದು.

2003-04ನೇ ಸಾಲಿನಲ್ಲಿ ಬಿಡುಗಡೆ ಮಾಡಲಾಗುವ ಮೊತ್ತಕ್ಕೆ ಉಪಯೋಗಿತ ಪ್ರಮಾಣ ಪತ್ರವನ್ನು ಅಡ್ವೊಕೇಟ್ ಜನರಲ್‌ರವರ (ಸಕ್ಷಮ ಪ್ರಾಧಿಕಾರದ) ಮೇಲು ರುಜುವಿನೊಂದಿಗೆ ಸಲ್ಲಿಸುವ ಷರತ್ತಿಗೊಳಪಟ್ಟಿದೆ.

ಈ ಸಹಾಯಾನುದಾನವನ್ನು ಲೆಕ್ಕ ಶೀರ್ಷಿಕೆ '2014-00-800-9-00-059-500' ಯೋಜನೇತರ ಅಡಿಯಲ್ಲಿ ಭರಿಸತಕ್ಕದ್ದು.

ಸದರಿ ಆದೇಶವನ್ನು ಆರ್ಥಿಕ ಇಲಾಖೆಯ ಆದೇಶ ಸಂಖ್ಯೆ: ಎಫ್‌ಡಿ 1 ಟಿಎಫ್‌ಪಿ 96 ದಿನಾಂಕ 10.07.1996ರನ್ವಯ ಕಾನೂನು ಕಾರ್ಯದರ್ಶಿಯವರಿಗೆ ಪ್ರತ್ಯಾಯೋಜಿಸಿರುವ ಅಧಿಕಾರದನ್ವಯ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 298

**ಜಿ.ಹೆಚ್. ನಾಗೇಂದ್ರಪ್ಪ**

ಸರ್ಕಾರದ ಅಧೀನ ಕಾರ್ಯದರ್ಶಿ, ಕಾನೂನು ಇಲಾಖೆ (ಆಡಳಿತ-2).

**ವಿಷಯ:** ಹಿರಿಯ ಸಹಾಯಕ ಸರ್ಕಾರಿ ಅಭಿಯೋಜಕರು ಸಹಾಯಕ ಅಭಿಯೋಗ ನಿರ್ದೇಶಕರ ಸ್ಥಾನಪನ್ನ ಅವಧಿಯನ್ನು ಘೋಷಿಸುವ ಬಗ್ಗೆ.

**ಓದಲಾಗಿದೆ:** ನಿರ್ದೇಶಕರು, ಅಭಿಯೋಗ ಮತ್ತು ಸರ್ಕಾರಿ ವ್ಯಾಜ್ಯಗಳ ಇಲಾಖೆ, ಬೆಂಗಳೂರುರವರ ಪತ್ರ ಸಂಖ್ಯೆ:ಡಿಪಿಎನ್: ಸಿಶಾ-1:259:2003-04 ದಿನಾಂಕ: 21.01.2004.

**ಪ್ರಸ್ತಾವನೆ:**

ಮೇಲೆ ಓದಲಾದ ಪತ್ರದಲ್ಲಿ ನಿರ್ದೇಶಕರು, ಅಭಿಯೋಗ ಮತ್ತು ಸರ್ಕಾರಿ ವ್ಯಾಜ್ಯಗಳ ಇಲಾಖೆ, ಬೆಂಗಳೂರು ಇವರು ಈ ಕೆಳಕಂಡ ಹಿರಿಯ ಸಹಾಯಕ ಸರ್ಕಾರಿ ಅಭಿಯೋಜಕರು:ಸಹಾಯಕ ಅಭಿಯೋಗ ನಿರ್ದೇಶಕರುಗಳ ವಿಶೇಷ ವರದಿಯನ್ನು ಸರ್ಕಾರಕ್ಕೆ ಸಲ್ಲಿಸಿರುತ್ತಾರೆ. ಸದರಿ ಅಧಿಕಾರಿಗಳು ಹಿರಿಯ ಸಹಾಯಕ ಸರ್ಕಾರಿ ಅಭಿಯೋಜಕರು: ಸಹಾಯಕ ಅಭಿಯೋಗ ನಿರ್ದೇಶಕ ಹುದ್ದೆಯ ಸ್ಥಾನಪನ್ನ ಅವಧಿಯಲ್ಲಿ ಅವರು ಕೆಲಸ ಕಾರ್ಯಗಳನ್ನು ತೃಪ್ತಿಕರವಾಗಿ ನಿರ್ವಹಿಸಿರುತ್ತಾರೆ. ಸ್ಥಾನಪನ್ನ ಅವಧಿಯಲ್ಲಿ ಅವರ ವಿರುದ್ಧ ಯಾವುದೇ ರೀತಿಯ ವ್ಯತಿರಿಕ್ತ ಷರಾಗಳಿರುವುದಿಲ್ಲ. ಆದ್ದರಿಂದ ಅವರುಗಳ ಸ್ಥಾನಪನ್ನ ಅವಧಿಯನ್ನು ತೃಪ್ತಿಕರವೆಂದು ಘೋಷಿಸಬೇಕೆಂದು ಸರ್ಕಾರವನ್ನು ಕೋರಿರುತ್ತಾರೆ.

**ಶ್ರೀಯುತರು**

1) ಪಿ.ಕೆ. ಮಲಪುರ,
2) ಎಸ್.ಬಿ. ಪೂಜಾರಿ
3) ಕೆ.ಕೆ. ಸೀತಾರಾಮು
4) ಎಸ್.ಎಸ್. ಮಹಾಲೆ
5) ಎಸ್.ಡಿ. ಕೆಮ್ಮನಕೇರಿ
6) ಎ.ಎಸ್. ಚಾಂದಕವಟೆ
7) ಐ.ಬಿ. ಚೌದರಿ

ಸರ್ಕಾರವು ಪ್ರಸ್ತಾವನೆಯನ್ನು ಪರಿಶೀಲಿಸಿ ಮೇಲ್ಕಂಡ ಅಧಿಕಾರಿಯವರ ಸ್ಥಾನಪನ್ನ ಅವಧಿಯನ್ನು ಘೋಷಿಸುವ ಬಗ್ಗೆ ಕೆಳಕಂಡಂತೆ ಆದೇಶ ಹೊರಡಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ಲಾ 258 ಪಿಪಿಇ 2003, ಬೆಂಗಳೂರು, ದಿನಾಂಕ: 25ನೇ ಫೆಬ್ರವರಿ 2004**

ಕರ್ನಾಟಕ ಸರ್ಕಾರಿ ಸೇವಾ (ಸಾಮಾನ್ಯ ನೇಮಕಾತಿ) ನಿಯಮಾವಳಿ 1977ರ ನಿಯಮ 19(3) (ಸಿ) ಪ್ರಕಾರ ಈ ಕೆಳಕಾಣಿಸಿದ ಹಿರಿಯ ಸಹಾಯಕ ಸರ್ಕಾರಿ ಅಭಿಯೋಜಕರು: ಸಹಾಯಕ ಅಭಿಯೋಗ ನಿರ್ದೇಶಕರುಗಳು ಅವರವರ ಹೆಸರಿನ ಮುಂದೆ ತೋರಿಸಲಾಗಿರುವ ದಿನಾಂಕದಿಂದ ಸ್ಥಾನಪನ್ನ ಅವಧಿಯನ್ನು ತೃಪ್ತಿಕರವಾಗಿ ಪೂರೈಸಿದ್ದಾರೆಂದು ಸರ್ಕಾರವು ಘೋಷಿಸಿದೆ.

| ಕ್ರ. ಸಂ. | ಅಧಿಕಾರಿಯವರ ಹೆಸರು ಶ್ರೀಯುತರು | ಹಿಸಸಅ:ಸಅನಿ ಹುದ್ದೆಗೆ ವರದಿ ಮಾಡಿಕೊಂಡ ದಿನಾಂಕ | ಸ್ಥಾನಪನ್ನ ಅವಧಿ ಮುಕ್ತಾಯಗೊಂಡ ದಿನಾಂಕ | ಸ್ಥಾನಪನ್ನ ಅವಧಿ ಘೋಷಿಸಿರುವ ದಿನಾಂಕ |
|---|---|---|---|---|
| 1 | ಪಿ.ಕೆ. ಮಲಪುರ | 14.07.1992 | 13.07.1993 | 14.07.1993 |
| 2 | ಎಸ್.ಬಿ. ಪೂಜಾರಿ | 29.06.1994 | 28.06.1995 | 29.06.1995 |
| 3 | ಕೆ.ಕೆ. ಸೀತಾರಾಮ | 17.06.1994 | 16.06.1995 | 17.06.1995 |
| 4 | ಎಸ್.ಎಸ್. ಮಹಾಲೆ | 06.07.1994 | 05.07.1995 | 06.07.1995 |
| 5 | ಎಸ್.ಡಿ. ಕೆಮ್ಮಣಕೇರಿ | 22.06.1994 | 21.06.1995 | 22.06.1995 |
| 6 | ಎ.ಎಸ್. ಚಾಂದಕವಟೆ | 05.07.1994 | 04.07.1995 | 05.07.1995 |
| 7 | ಐ.ಬಿ. ಚೌದರಿ | 17.06.1994 | 16.06.1995 | 17.06.1995 |

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 299

**ಜಿ.ಹೆಚ್. ನಾಗೇಂದ್ರಪ್ಪ**

ಸರ್ಕಾರದ ಅಧೀನ ಕಾರ್ಯದರ್ಶಿ, ಕಾನೂನು ಇಲಾಖೆ (ಆಡಳಿತ-2).

**ವಿಷಯ:** ಶ್ರೀ ರಾವ್‌ಸಾಹೇಬ್ ಅಣ್ಣಾ ಸಾಹೇಬ ಪಾಟೀಲ್, ವಕೀಲರು, ಚಿಕ್ಕೋಡಿ ಇವರನ್ನು ಚಿಕ್ಕೋಡಿ ಕಂದಾಯ ತಾಲ್ಲೂಕಿಗೆ ಹೆಚ್ಚುವರಿ ನೋಟರಿಯಾಗಿ ನೇಮಕ ಮಾಡುವ ಬಗ್ಗೆ.

**ಓದಲಾಗಿದೆ:**
1. ದಿನಾಂಕ:9-1-2004ರ ಸರ್ಕಾರಿ ಆದೇಶ ಸಂಖ್ಯೆ: ಲಾ 138 ಎಲ್‌ಸಿಎಲ್ 2003.
2. ಜಿಲ್ಲಾ ಮತ್ತು ಸತ್ರ ನ್ಯಾಯಾಧೀಶರು, ಬೆಳಗಾಂ ರವರ ಪತ್ರ ಸಂಖ್ಯೆ:ಎಡಿಎಂ:1566:04, ದಿನಾಂಕ: 10-2-2004.

**ಪ್ರಸ್ತಾವನೆ:**

ಮೇಲೆ ಓದಲಾಗಿರುವ (1)ದಿ:9.1.04ರ ಸರ್ಕಾರಿ ಆದೇಶದಲ್ಲಿ ಬೆಳಗಾಂ ಜಿಲ್ಲೆಯ ಚಿಕ್ಕೋಡಿ ಕಂದಾಯ ತಾಲ್ಲೂಕಿಗೆ ಒಂದು ನೋಟರಿ ಹುದ್ದೆಯನ್ನು ಹೆಚ್ಚುವರಿಯಾಗಿ ಮಂಜೂರು ಮಾಡಲಾಗಿದೆ.

ಹೆಚ್ಚುವರಿಯಾಗಿ ಮಂಜೂರು ಮಾಡಲಾಗಿರುವ ನೋಟರಿ ಹುದ್ದೆಗೆ ಮೇಲೆ ಓದಲಾಗಿರುವ (2) ದಿನಾಂಕ:10.2.2004ರ ಪತ್ರದಲ್ಲಿ ಜಿಲ್ಲಾ ಮತ್ತು ಸತ್ರ ನ್ಯಾಯಾಧೀಶರು ಬೆಳಗಾಂ ರವರು ಅರ್ಜಿಯನ್ನು ಆಹ್ವಾನಿಸಿ ಮೆಮೋರಿಯಲ್ಸ್‌ಗಳ ಜೊತೆ ನೇಮಕಾತಿ ಕೋರಿ ಪ್ರಸ್ತಾವನೆ ಸಲ್ಲಿಸಿರುತ್ತಾರೆ.

**ಸರ್ಕಾರಿ ಆದೇಶ ಸಂಖ್ಯೆ: ಲಾ 138, ಎಲ್‌ಸಿಎಲ್ 2003, ಬೆಂಗಳೂರು, ದಿನಾಂಕ: 3ನೇ ಮಾರ್ಚ್ 2004**

ಪ್ರಸ್ತಾವನೆಯನ್ನು ಕೂಲಂಕಷವಾಗಿ ಪರಿಶೀಲಿಸಿ, 1956ರ ನೋಟರಿ ನಿಯಮಾವಳಿಗಳ ನಿಯಮ 8(1)ರಲ್ಲಿ ಪ್ರದತ್ತವಾಗಿರುವ ಅಧಿಕಾರವನ್ನು ಚಲಾಯಿಸಿ, ಸರ್ಕಾರವು 1952ರ ನೋಟರಿ ಅಧಿನಿಯಮ ಮತ್ತು ಅವುಗಳ ಅಡಿಯಲ್ಲಿ ರಚಿಸಲಾಗಿರುವ ನಿಯಮಗಳ ರೀತ್ಯ ಶ್ರೀ ರಾವ್‌ಸಾಹೇಬ್ ಅಣ್ಣಾಸಾಹೇಬ್ ಪಾಟೀಲ್, ವಕೀಲರು, ಶಿರದವಾಡ ಅಂಚೆ, ಚಿಕ್ಕೋಡಿ ತಾಲ್ಲೂಕು, ಬೆಳಗಾಂ ಜಿಲ್ಲೆ ಇವರನ್ನು ವೃತ್ತಿ ಪ್ರಮಾಣ ಪತ್ರ ನೀಡಲಾದ ದಿನಾಂಕದಿಂದ ಐದು ವರ್ಷಗಳ ಅವಧಿಗೆ ಚಿಕ್ಕೋಡಿ ಕಂದಾಯ ತಾಲ್ಲೂಕಿಗೆ ಹೆಚ್ಚುವರಿ ನೋಟರಿಯನ್ನಾಗಿ ನೇಮಿಸಿದೆ.

ಮೇಲೆ ಹೆಸರಿಸಲಾಗಿರುವ ವಕೀಲರು "0070 ಇತರೆ ಆಡಳಿತಾತ್ಮಕ ಸೇವೆಗಳು-01 ನ್ಯಾಯ ಪರಿಪಾಲನೆ-501-0-ಇತರೆ ಸ್ವೀಕೃತಿಗಳು-06 ಇತರೆ ಬಾಬುಗಳು" ಈ ಲೆಕ್ಕ ಶೀರ್ಷಿಕೆಗೆ ಸರ್ಕಾರಿ ಖಜಾನೆಯಲ್ಲಿ ನಿಗದಿಪಡಿಸಲಾದ ರೂ. 1000 (ಒಂದು ಸಾವಿರಗಳು ಮಾತ್ರ) ಶುಲ್ಕವನ್ನು ಜಮಾ ಮಾಡಿ ಆ ಬಗೆಗಿನ ಚಲಾನ್ ಮತ್ತು ಹುಟ್ಟಿದ ದಿನಾಂಕವನ್ನು ದೃಢೀಕರಿಸಬಲ್ಲ ದಾಖಲೆಯನ್ನು ಹಾಜರುಪಡಿಸಿದ ನಂತರ ಸದರಿಯವರಿಗೆ ವೃತ್ತಿ ಪ್ರಮಾಣ ಪತ್ರ ನೀಡಲಾಗುವುದು.

ವೃತ್ತಿ ಪ್ರಮಾಣ ಪತ್ರ ನೀಡುತ್ತಿದ್ದ ಹಾಗೆ ಶ್ರೀಯುತರ ಹೆಸರನ್ನು 1952ರ ನೋಟರಿ ಕಾಯ್ದೆಯ ಅಧಿನಿಯಮ 4ನೇ ಪ್ರಕರಣದಡಿಯಲ್ಲಿ ಸರ್ಕಾರ ನಿರ್ವಹಿಸುತ್ತಿರುವ ರಿಜಿಸ್ಟರ್‌ನಲ್ಲಿ ನಮೂದಿಸಲಾಗುವುದು.

ಮೇಲ್ಕಂಡ ಅಂಶಗಳ ಬಗೆಗಿನ ಎಲ್ಲಾ ವೆಚ್ಚವನ್ನು ಶ್ರೀಯುತರೇ ಭರಿಸತಕ್ಕದ್ದು.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 300

**ಜಿ.ಹೆಚ್. ನಾಗೇಂದ್ರಪ್ಪ**

ಸರ್ಕಾರದ ಅಧೀನ ಕಾರ್ಯದರ್ಶಿ, ಕಾನೂನು ಇಲಾಖೆ (ಆಡಳಿತ-2).

**ವಿಷಯ:** ಶ್ರೀ ವೆಂಕೋಬರಾಯ ಎಂ. ಮೇಟಿ, ವಕೀಲರು, ದೇವದುರ್ಗ ಮತ್ತು ಶ್ರೀ ಪ್ರಕಾಶ್ ಅಬಕಾರಿ, ವಕೀಲರು, ದೇವದುರ್ಗ ಇವರುಗಳನ್ನು ಶ್ರೀ ವೀರಪ್ಪ ನೋಟರಿ, ದೇವದುರ್ಗ ಹಾಗೂ ಆರ್. ಬುಸಯ್ಯಸ್ವಾಮಿ, ನೋಟರಿ, ದೇವದುರ್ಗ ಇವರುಗಳ ನಿಧನದಿಂದ ತೆರವಾದ ನೋಟರಿ, ಹುದ್ದೆಗೆ ನೇಮಕಾತಿ ಮಾಡುವ ಬಗ್ಗೆ - ಆದೇಶ.

**ಓದಲಾಗಿದೆ:**
1. ದಿನಾಂಕ: 16-12-2003ರ ಸರ್ಕಾರಿ ಪತ್ರ ಸಂಖ್ಯೆ: ಲಾ 110 ಎಲ್‌ಸಿಎಲ್ 03.
2. ಜಿಲ್ಲಾ ಮತ್ತು ಸತ್ರ ನ್ಯಾಯಾಧೀಶರು, ರಾಯಚೂರು ರವರ ಪತ್ರ ಸಂಖ್ಯೆ:ಎಡಿಎಂಎನ್:614:2004, ದಿನಾಂಕ: 30:31-1-2004.

**ಪ್ರಸ್ತಾವನೆ:**

ಮೇಲೆ ಓದಲಾಗಿರುವ (1) ದಿನಾಂಕ: 16.12.2003ರ ಸರ್ಕಾರಿ ಪತ್ರದಲ್ಲಿ ಶ್ರೀ ಬಿ.ವೀರಪ್ಪ ಹಾಗೂ ಆರ್. ಬುಸಯ್ಯ ಸ್ವಾಮಿ, ನೋಟರಿಗಳು, ದೇವದುರ್ಗ ಇವರುಗಳ ನಿಧನದಿಂದ ತೆರವಾದ ನೋಟರಿ ಹುದ್ದೆಯ ನೇಮಕಾತಿಗೆ ಪ್ರಸ್ತಾವನೆ ಸಲ್ಲಿಸುವಂತೆ ಜಿಲ್ಲಾ ಸತ್ರ ನ್ಯಾಯಾಧೀಶರು, ರಾಯಚೂರು ಇವರನ್ನು ಕೋರಲಾಗಿತ್ತು.

ಮೇಲೆ ಓದಲಾಗಿರುವ (2) ದಿನಾಂಕ:30:30-1-04 ರ ಪತ್ರದಲ್ಲಿ ಜಿಲ್ಲಾ ಮತ್ತು ಸತ್ರ ನ್ಯಾಯಾಧೀಶರು, ರಾಯಚೂರು ರವರು ಅರ್ಜಿಯನ್ನು ಆಹ್ವಾನಿಸಿ ಮೆಮೋರಿಯಲ್ಸ್‌ಗಳ ಜೊತೆ ನೇಮಕಾತಿ ಕೋರಿ ಪ್ರಸ್ತಾವನೆ ಸಲ್ಲಿಸಿರುತ್ತಾರೆ.

**ಸರ್ಕಾರಿ ಆದೇಶ ಸಂಖ್ಯೆ: ಲಾ 110 ಎಲ್‌ಸಿಎಲ್ 2003, ಬೆಂಗಳೂರು, ದಿನಾಂಕ: 27ನೇ ಫೆಬ್ರವರಿ 2004**

ಪ್ರಸ್ತಾವನೆಯನ್ನು ಕೂಲಂಕಷವಾಗಿ ಪರಿಶೀಲಿಸಿ, 1956ರ ನೋಟರಿ ನಿಯಮಾವಳಿಗಳ ನಿಯಮ 8(1)ರಲ್ಲಿ ಪ್ರದತ್ತ ವಾಗಿರುವ ಅಧಿಕಾರವನ್ನು ಚಲಾಯಿಸಿ ಸರ್ಕಾರವು 1952ರ ನೋಟರಿ ಅಧಿನಿಯಮ ಮತ್ತು ಅವುಗಳ ಅಡಿಯಲ್ಲಿ ರಚಿಸಲಾಗಿರುವ ನಿಯಮಗಳ ರೀತ್ಯ ಶ್ರೀ ವೆಂಕೋಬರಾಯ ಎಂ.ಮೇಟಿ, ವಕೀಲರು, ಶಾಂತಿನಗರ, ದೇವದುರ್ಗ, ರಾಯಚೂರು ಜಿಲ್ಲೆ ಮತ್ತು ಶ್ರೀ ಪ್ರಕಾಶ್ ಅಬಕಾರಿ ವಕೀಲರು, ಹಳೇ ಹೈಸ್ಕೂಲ್ ಏರಿಯಾ, ದೇವದುರ್ಗ, ರಾಯಚೂರು ಜಿಲ್ಲೆ ಇವರನ್ನು ವೃತ್ತಿ ಪ್ರಮಾಣ ಪತ್ರ ನೀಡಲಾದ ದಿನಾಂಕದಿಂದ ಐದು ವರ್ಷಗಳ ಅವಧಿಗೆ ದೇವದುರ್ಗ ಕಂದಾಯ ತಾಲ್ಲೂಕಿಗೆ ನೋಟರಿಗಳನ್ನಾಗಿ ನೇಮಿಸಿದೆ.

ಮೇಲೆ ಹೆಸರಿಸಲಾಗಿರುವ ವಕೀಲರು "0070 ಇತರೆ ಆಡಳಿತಾತ್ಮಕ ಸೇವೆಗಳು-01 ನ್ಯಾಯ ಪರಿಪಾಲನೆ-501-0-ಇತರೆ ಸ್ವೀಕೃತಿಗಳು-06 ಇತರೆ ಬಾಬುಗಳು" ಈ ಲೆಕ್ಕ ಶೀರ್ಷಿಕೆಗೆ ಸರ್ಕಾರಿ ಖಜಾನೆಯಲ್ಲಿ ನಿಗದಿಪಡಿಸಲಾದ ರೂ.1000 (ರೂ. ಒಂದು ಸಾವಿರಗಳು ಮಾತ್ರ) ಶುಲ್ಕವನ್ನು ಜಮಾ ಮಾಡಿ ಆ ಬಗೆಗಿನ ಚಲಾನ್ ಮತ್ತು ಹುಟ್ಟಿದ ದಿನಾಂಕವನ್ನು ದೃಢೀಕರಿಸಬಲ್ಲ ದಾಖಲೆಯನ್ನು ಹಾಜರುಪಡಿಸಿದ ನಂತರ ಸದರಿಯವರಿಗೆ ವೃತ್ತಿ ಪ್ರಮಾಣ ಪತ್ರ ನೀಡಲಾಗುವುದು.

ವೃತ್ತಿ ಪ್ರಮಾಣ ಪತ್ರ ನೀಡುತ್ತಿದ್ದ ಹಾಗೆ ಶ್ರೀಯುತರ ಹೆಸರನ್ನು 1952ರ ನೋಟರಿ ಕಾಯ್ದೆಯ ಅಧಿನಿಯಮ 4ನೇ ಪ್ರಕರಣದಡಿಯಲ್ಲಿ ಸರ್ಕಾರ ನಿರ್ವಹಿಸುತ್ತಿರುವ ರಿಜಿಸ್ಟರ್‌ನಲ್ಲಿ ನಮೂದಿಸಲಾಗುವುದು.

ಮೇಲ್ಕಂಡ ಅಂಶಗಳ ಬಗೆಗಿನ ಎಲ್ಲಾ ವೆಚ್ಚವನ್ನು ಶ್ರೀಯುತರೇ ಭರಿಸತಕ್ಕದ್ದು.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 301

**ಜಿ.ಹೆಚ್. ನಾಗೇಂದ್ರಪ್ಪ**

ಸರ್ಕಾರದ ಅಧೀನ ಕಾರ್ಯದರ್ಶಿ, ಕಾನೂನು ಇಲಾಖೆ (ಆಡಳಿತ-2).

**ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್ ರಾಜ್ ಸಚಿವಾಲಯ**

**ವಿಷಯ:** ಬಿಜಾಪುರ ಜಿಲ್ಲೆ ಮುದೋಳ ತಾಲ್ಲೂಕಿನ ಡವಳೇಶ್ವರ, ಹಳಕಿ-ನಿಂಗಾಪುರ ಗ್ರಾಮಗಳಲ್ಲಿನ ಕುಡಿಯುವ ನೀರಿನ ಯೋಜನೆಗಳಲ್ಲಿ ಆಗಿರುವ ಹಣ ದುರುಪಯೋಗಕ್ಕೆ ಕಾರಣರಾದ ಅಧಿಕಾರಿ:ನೌಕರರ ವಿರುದ್ಧದ ಇಲಾಖಾ ವಿಚಾರಣೆ-ದಂಡನೆ ವಿಧಿಸುವ ಬಗ್ಗೆ-ಆದೇಶ.

**ಓದಲಾಗಿದೆ:**

1. ಮುಖ್ಯ ಕಾರ್ಯನಿರ್ವಾಹಕ ಅಧಿಕಾರಿ, ಜಿಲ್ಲಾ ಪಂಚಾಯತ್, ಬಿಜಾಪುರ ಇವರ ಪತ್ರ ಸಂ:ಜಿಪಂಅ:ಗ್ರಾಪಂ: ಸಿಬ್ಬಂದಿ-ಸಿಆರ್64:97-98 ದಿ.21-8-97 ಮತ್ತು 12-9-97.
2. ಕಾರಣ ಕೇಳುವ ನೋಟೀಸ್ ಸಂ:ಗ್ರಾಅಪ 99 ಇಎನ್‌ಕ್ಯೂ 97 ದಿ:17:18-2-98.
3. ಶ್ರೀ ವಿ.ಎಂ. ದೊಡ್ಡಮನಿ, ಅಂದಿನ ಸಹಾಯಕ ಕಾರ್ಯಪಾಲಕ ಇಂಜಿನಿಯರ್ ಮತ್ತು ಶ್ರೀ ವೈ.ವೈ. ಮಾಧರ್, ನಿವೃತ್ತ ಗ್ರಾಮ ಪಂಚಾಯಿತಿ ಕಾರ್ಯದರ್ಶಿ ಇವರ ದಿ.18-3-98 ಮತ್ತು 2-3-98ರ ರಕ್ಷಣಾ ಹೇಳಿಕೆಗಳು.
4. ಸರ್ಕಾರದ ಆದೇಶ ಸಂಖ್ಯೆ: ಗ್ರಾಅಪ 99 ಇಎನ್‌ಕ್ಯೂ 97 ದಿ.6-6-98.
5. ವಿಚಾರಣಾಧಿಕಾರಿಗಳ ದಿ.18-12-01ರ ವಿಚಾರಣಾ ವರದಿ.
6. 2ನೇ ಕಾರಣ ಕೇಳುವ ನೋಟೀಸ್ ಸಂ:ಗ್ರಾಅಪ 99 ಇಎನ್‌ಕ್ಯೂ 97 ದಿ.12-2-02.
7. ಶ್ರೀ ವಿ.ಎಂ. ದೊಡ್ಡಮನಿ, ಸಹಾಯಕ ಕಾರ್ಯಪಾಲಕ ಇಂಜಿನಿಯರ್ (ನಿವೃತ್ತ), ಶ್ರೀ ಡಿ.ಎಂ. ನಾಗರಾಳಮಠ್, ಕಿರಿಯ ಇಂಜಿನಿಯರ್ (ನಿವೃತ್ತ) ಮತ್ತು ಶ್ರೀ ಬಿ.ಎಸ್. ಪಟ್ಟಣ, ಮಂಡಲ ಪಂಚಾಯಿತಿ ಕಾರ್ಯದರ್ಶಿ (ನಿವೃತ್ತ) ಇವರ ದಿ.27-2-02, 22-2-02 ಮತ್ತು 10-11-02ರ ಲಿಖಿತ ಹೇಳಿಕೆಗಳು.
8. ಕಾರ್ಯದರ್ಶಿ, ಕರ್ನಾಟಕ ಲೋಕಸೇವಾ ಆಯೋಗ ಇವರ ಪತ್ರ ಸಂ:ಪಿಎಸ್‌ಸಿ:8:ಸಿಎನ್‌ಎಸ್ 2003 ದಿನಾಂಕ:22.1.04

**ಪ್ರಸ್ತಾವನೆ:**

ಮೇಲೆ ಓದಲಾದ ಕ್ರಮ ಸಂಖ್ಯೆ (1)ರ ಪತ್ರದಲ್ಲಿ ಮುಖ್ಯ ಕಾರ್ಯನಿರ್ವಾಹಕ ಅಧಿಕಾರಿ, ಜಿಲ್ಲಾ ಪಂಚಾಯತ್, ಬಿಜಾಪುರ ಇವರು ಬಿಜಾಪುರ ಜಿಲ್ಲೆ ಮುದೋಳ ತಾಲ್ಲೂಕಿನ ಡವಳೇಶ್ವರ, ಹಳಕಿ-ನಿಂಗಾಪುರ ಗ್ರಾಮಗಳಲ್ಲಿನ ಕುಡಿಯುವ ನೀರಿನ ಯೋಜನೆಗಳಲ್ಲಿ ಆಗಿರುವ ಹಣ ದುರುಪಯೋಗಕ್ಕೆ ಶ್ರೀ ವಿ.ಎಂ. ದೊಡ್ಡಮನಿ, ಅಂದಿನ ಸಹಾಯಕ ಕಾರ್ಯಪಾಲಕ ಇಂಜಿನಿಯರ್, ಶ್ರೀ ಬಿ.ಎಸ್. ಪಟ್ಟಣ, ಅಂದಿನ ಮಂಡಲ ಪಂಚಾಯಿತಿ ಕಾರ್ಯದರ್ಶಿ, ಶ್ರೀ ಡಿ.ಎಂ. ನಾಗರಾಳಮಠ್, ಅಂದಿನ ಕಿರಿಯ ಇಂಜಿನಿಯರ್, ಶ್ರೀ ಎಸ್.ಎನ್. ಗೋಡಿ, ನಿವೃತ್ತ ಕಾರ್ಯಪಾಲಕ ಇಂಜಿನಿಯರ್, ಮತ್ತು ಶ್ರೀ ವೈ.ವೈ.ಮಾಧರ್, ಅಂದಿನ ಗ್ರಾಮ ಪಂಚಾಯಿತಿ ಕಾರ್ಯದರ್ಶಿ ಇವರುಗಳು ಮೇಲ್ನೋಟಕ್ಕೆ ಕಾರಣರೆಂದು ಕಂಡು ಬಂದಿರುವುದರಿಂದ ಅವರುಗಳ ಮೇಲೆ ಜಂಟಿ ಇಲಾಖಾ ವಿಚಾರಣೆ

ನಡೆಸಲು ಸರ್ಕಾರಕ್ಕೆ ಕರಡು ಆರೋಪ ಪಟ್ಟಿಯೊಂದಿಗೆ ಪ್ರಸ್ತಾವನೆಯನ್ನು ಸಲ್ಲಿಸಿದ್ದರು. ಸರ್ಕಾರವು ಪ್ರಸ್ತಾವನೆಯನ್ನು ಪರಿಶೀಲಿಸಿ, ಶ್ರೀ ಎಸ್.ಎನ್. ಗೋಡಿ, ಕಾರ್ಯಪಾಲಕ ಇಂಜಿನಿಯರ್ ಇವರು ದಿ.28.2.93ರಂದು ಹಾಗೂ ಶ್ರೀ ವೈ.ವೈ. ಮಾಧರ್ ಇವರು ದಿ.30.5.96ರಲ್ಲಿ ನಿವೃತ್ತಿ ಹೊಂದಿರುವುದರಿಂದ, ಹಾಗೂ ಈ ಪ್ರಕರಣವು ದಿ.15.2.90 ರಿಂದ 28.2.92ರೊಳಗೆ ನಡೆದಿರುವುದರಿಂದ ಇವರುಗಳ ವಿರುದ್ಧ ಇಲಾಖಾ ವಿಚಾರಣೆ ನಡೆಸಲು ಆಸ್ಪದವಿಲ್ಲದಿರುವುದನ್ನು ಮನಗಂಡು ಮೇಲೆ ಓದಲಾದ ಕ್ರಮ ಸಂಖ್ಯೆ (2)ರ ಕಾರಣ ಕೇಳುವ ನೋಟಿಸ್‌ನೊಂದಿಗೆ ಶ್ರೀ ವಿ.ಎಂ. ದೊಡ್ಡಮನಿ, ಶ್ರೀ ಬಿ.ಎಸ್. ಪಟ್ಟಣ, ಮತ್ತು ಶ್ರೀ ಡಿ.ಎಂ. ನಾಗರಾಳಮಠ್, ಇವರುಗಳ ಮೇಲೆ ಕರ್ನಾಟಕ ಸರ್ಕಾರಿ ಸೇವಾ (ವರ್ಗೀಕರಣ, ನಿಯಂತ್ರಣ, ಮೇಲ್ಮನವಿ) ನಿಯಮಾವಳಿಗಳ 1957ರ ನಿಯಮ 11 ರೆಡ್ ವಿತ್ 13 ರನ್ವಯ ಜಂಟಿ ಇಲಾಖೆ ವಿಚಾರಣೆ ಹೂಡಲು ನಿರ್ಧರಿಸಿ, ಆರೋಪಪಟ್ಟಿಯನ್ನು ಜಾರಿ ಮಾಡಿತ್ತು. ಆಪಾದಿತರ ಮೇಲಿನ ಆಪಾದನೆಗಳ ಸಾರಂಶ ಈ ಕೆಳಕಂಡಂತಿದೆ.

1) ಡವಳೇಶ್ವರ ಗ್ರಾಮದ ಕುಡಿಯುವ ನೀರಿನ ಯೋಜನೆಯ ಕಾಮಗಾರಿ ಕಳಪೆ ಮಟ್ಟದ್ದಾಗಿದ್ದರೂ ಗುತ್ತಿಗೆದಾರರಿಗೆ 2,54,571-00ರೂ.ಗಳನ್ನು ಸಂದಾಯ ಮಾಡಿರುವುದು.
2) ಡವಳೇಶ್ವರ ನೀರು ಸರಬರಾಜು ಕಾಮಗಾರಿ ಪೂರ್ಣಗೊಂಡು ಒಂದು ತಿಂಗಳ ನಂತರ ಪೈಪುಗಳು ಹೊಡೆದು ನೀರು ಸರಬರಾಜು ಸ್ಥಗಿತಗೊಂಡ ನಂತರವು ಅದನ್ನು ಸರಿಪಡಿಸದ ಗುತ್ತಿಗೆದಾರರಿಗೆ ಅಂತಿಮ ಬಿಲ್ಲು ಸಂದಾಯ ಮಾಡಿ, ಹಣ ದುರುಪಯೋಗ ಮಾಡಿರುವುದು.
3) ಕಳಪೆ ಕಾಮಗಾರಿಯಾಗಿದ್ದರೂ ಸಹ ಗುತ್ತಿಗೆದಾರರೊಂದಿಗೆ ಶಾಮೀಲಾಗಿ ಅದನ್ನು ಅಳತೆ ಪುಸ್ತಕದಲ್ಲಿ ದಾಖಲೆ ಮಾಡಿ ಹಣ ಸಂದಾಯ ಮಾಡಿರುವುದು.
4) ಮೆಟಗುಡ್ಡ ಮಂಡಲ ಪಂಚಾಯಿತಿ ವ್ಯಾಪ್ತಿಯ ಚಚಕಂಡಿ ಗ್ರಾಮದಲ್ಲಿ ಜವಾಹರ್ ರೋಜಗಾರ್ ಯೋಜನೆಯಡಿಯಲ್ಲಿ ಫರಸಿ ಕಾಮಗಾರಿ ನಿರ್ವಹಿಸದೆ 32,964-00ರೂ.ಗಳನ್ನು ಖರ್ಚು ಮಾಡಿರುವುದು.
5) ಜವಾಹರ್ ರೋಜಗಾರ್ ಯೋಜನೆಗೆ ಬಿಡುಗಡೆ ಮಾಡಿ ಹಣವನ್ನು ನಿಗದಿಪಡಿಸಿದ ಯೋಜನೆಗೆ ವೆಚ್ಚ ಮಾಡದೆ ದುರುಪಯೋಗ ಪಡಿಸಿಕೊಂಡಿರುವುದು.

ಮೇಲೆ ಓದಲಾದ ಕ್ರಮ ಸಂಖ್ಯೆ (3)ರಲ್ಲಿ ಆಪಾದಿತ ಅಧಿಕಾರಿ:ನೌಕರರು ತಮ್ಮ ಲಿಖಿತ ಹೇಳಿಕೆಗಳನ್ನು ಸಲ್ಲಿಸಿ ತಮ್ಮ ಮೇಲಿನ ಆಪಾದನೆಗಳನ್ನು ನಿರಾಕರಿಸಿದ್ದರು. ಸರ್ಕಾರವು ಸದರಿ ಲಿಖಿತ ಹೇಳಿಕೆಗಳನ್ನು ಪರಿಶೀಲಿಸಿದಾಗ ಇವರುಗಳ ಮೇಲಿನ ಆರೋಪಗಳಲ್ಲಿ ಮೇಲ್ನೋಟಕ್ಕೆ ಸತ್ಯಾಂಶವಿದೆ ಎಂದು ಕಂಡು ಬಂದ್ದುದರಿಂದ ಪ್ರಕರಣದಲ್ಲಿ ಸತ್ಯಾಸತ್ಯಾತೆಯನ್ನು ಅರಿಯಲು ವಿವರವಾದ ವಿಚಾರಣೆ ನಡೆಸಲು ನಿರ್ಧರಿಸಿ, ಮುಖ್ಯ ಕಾರ್ಯನಿರ್ವಾಹಕ ಅಧಿಕಾರಿ, ಜಿಲ್ಲಾ ಪಂಚಾಯತ್, ಬಿಜಾಪುರ ಇವರನ್ನು ಮೇಲೆ ಓದಲಾದ ಕ್ರಮ ಸಂಖ್ಯೆ (4)ರ ಆದೇಶದಲ್ಲಿ ವಿಚಾರಣಾಧಿಕಾರಿಗಳನ್ನಾಗಿ ನೇಮಿಸಿತ್ತು. ಅದರಂತೆ ಶ್ರೀ ವಿ.ಎಂ. ದೊಡ್ಡಮನಿ, ಶ್ರೀ ಬಿ.ಎಸ್. ಪಟ್ಟಣ, ಮತ್ತು ಶ್ರೀ ಡಿ.ಎಂ. ನಾಗರಾಳಮಠ್, ಇವರುಗಳ ಮೇಲಿನ ಆಪಾದನೆಗಳ ಬಗ್ಗೆ ವಿಚಾರಣಾಧಿಕಾರಿಗಳು ವಿಚಾರಣೆ ನಡೆಸಿ, ಮೇಲೆ ಓದಲಾದ ಕ್ರಮ ಸಂಖ್ಯೆ (5)ರಲ್ಲಿ ಸರ್ಕಾರಕ್ಕೆ ವಿಚಾರಣಾ ವರದಿ ಸಲ್ಲಿಸಿದ್ದರು. ವಿಚಾರಣಾ ವರದಿಯಂತೆ ಕುಡಿಯುವ ನೀರಿನ ಯೋಜನೆಯ ಪೂರೈಕೆ ಕಾಮಗಾರಿ ಕಳಪೆ ಮಟ್ಟದ್ದಾಗಿದ್ದರೂ ಗುತ್ತಿಗೆದಾರರಿಗೆ 2,54,571-00 ರೂ. ಗಳನ್ನು ಸಂದಾಯ ಮಾಡಿರುವರೆಂಬ ಆಪಾದನೆ ರುಜುವಾತಾಗುತ್ತದೆಂದು, ಆಪಾದಿಸಿದಂತೆ ಆಪಾದಿತರಾದ ಶ್ರೀ ವಿ.ಎಂ. ದೊಡ್ಡಮನಿ, ಅಂದಿನ ಸಹಾಯಕ ಕಾರ್ಯಪಾಲಕ ಇಂಜಿನಿಯರ್ ಮತ್ತು ಕಿರಿಯ ಇಂಜಿನಿಯರ್‌ರಾದ ಶ್ರೀ ಡಿ.ಎಂ. ನಾಗರಾಳಮಠ ಇವರು ಇದಕ್ಕೆ ಕಾರಣರೆಂದು ತಿಳಿಸಿರುತ್ತಾರೆ.

ಮೆಟಗುಡ್ಡ ಮಂಡಲ ಪಂಚಾಯತಿ ವ್ಯಾಪ್ತಿಯ ಚಚಕಂಡಿಗ್ರಾಮದಲ್ಲಿ ಜವಾಹರ್ ರೋಜಗಾರ್ ಯೋಜನೆಯಡಿಯಲ್ಲಿ ಫರಸಿ ಕಾಮಗಾರಿ ನಿರ್ವಹಿಸದೆ 32,964-00ರೂ.ಗಳನ್ನು ಖರ್ಚು ಮಾಡಿರುವರೆಂಬ ಆಪಾದನೆ ಬಗ್ಗೆ ವಿಚಾರಣಾಧಿಕಾರಿಗಳು ವರದಿ ಸಲ್ಲಿಸಿ, ಈ ಆಪಾದನೆಗೆ ಸಂಬಂಧಿಸಿದಂತೆ ಶ್ರೀ ಬಿ.ಎಸ್. ಪಟ್ಟಣ, ಅಂದಿನ ಮಂಡಲ ಪಂಚಾಯಿತಿ ಕಾರ್ಯದರ್ಶಿ ಇವರ ಮೇಲೆ 10,907-00ರೂ.ಗಳ ಹಣ ದುರುಪಯೋಗ ಸಾಬೀತಾಗಿದೆಯೆಂದು ಇನ್ನುಳಿದ 22,027-00ರೂ.ಗಳ ಹಣ ದುರುಪಯೋಗಕ್ಕೆ ಶ್ರೀ ವೈ.ವೈ. ಮಾಧರ್, ಅಂದಿನ ಗ್ರಾಮ ಪಂಚಾಯಿತಿ ಕಾರ್ಯದರ್ಶಿ ಇವರು ಕಾರಣರೆಂದು ತಿಳಿಸಿರುತ್ತಾರೆ.

ಜಿಲ್ಲಾ ಪಂಚಾಯತ್ ಕಾರ್ಯ ಪರಿಶೀಲನಾ ವರದಿ ಹಾಗೂ ಪ್ರಕರಣದಲ್ಲಿ ಒದಗಿ ಬಂದ ಸಾಕ್ಷ್ಯಾಧಾರಗಳ ಹಿನ್ನೆಲೆಯಲ್ಲಿ ಜವಾಹರ್ ರೋಜಗಾರ್ ಯೋಜನೆಯಡಿ ಮಂಡಲ ಪಂಚಾಯಿತಿಗೆ ಬಿಡುಗಡೆ ಮಾಡಿದ್ದ ಹಣವನ್ನು ನಿಗದಿಪಡಿಸಿದ ಯೋಜನೆಗೆ ವೆಚ್ಚ ಮಾಡದೆ ದುರುಪಯೋಗವಾಗಲು ಕಾರಣರೆಂಬ ಆಪಾದನೆಗೆ ಸಂಬಂಧಿಸಿದಂತೆ ಶ್ರೀ ವಿ.ಎಂ. ದೊಡ್ಡಮನಿ, ಅಂದಿನ ಸಹಾಯಕ ಕಾರ್ಯಪಾಲಕ ಇಂಜಿನಿಯರ್ ಮತ್ತು ಶ್ರೀ ಬಿ.ಎಸ್. ಪಟ್ಟಣ, ಅಂದಿನ ಮಂಡಲ ಪಂಚಾಯಿತಿ ಕಾರ್ಯದರ್ಶಿ ಇವರ ಮೇಲಿನ ಆರೋಪಗಳು ಸಾಬೀತಾಗುವುದಾಗಿ ವಿಚಾರಣಾಧಿಕಾರಿಗಳು ವರದಿ ಮಾಡಿದ್ದಾರೆ. ಸರ್ಕಾರವು ವಿಚಾರಣಾ ವರದಿಯನ್ನು ಒಪ್ಪಲು ನಿರ್ಧರಿಸಿ ನಿಯಮಾನುರಿತ್ಯ ಮೇಲೆ ಓದಲಾದ ಕ್ರಮ ಸಂಖ್ಯೆ (6)ರ ಎರಡನೇ ಕಾರಣ ಕೇಳುವ ನೋಟಿಸಿನೊಂದಿಗೆ ಆಪಾದಿತರಿಗೆ ವಿಚಾರಣಾ ವರದಿಯ ಪ್ರತಿಯನ್ನು ಒದಗಿಸಿತ್ತು. ಆಪಾದಿತರು ಮೇಲೆ ಓದಲಾದ ಕ್ರಮ ಸಂಖ್ಯೆ (7) ರಂತೆ ಲಿಖಿತ ಹೇಳಿಕೆಗಳನ್ನು ಸಲ್ಲಿಸಿ, ತಮ್ಮ ಮೇಲಿನ ಆರೋಪಗಳನ್ನು ನಿರಾಕರಿಸಿದ್ದರು. ಆದರೆ ಈ ಬಗ್ಗೆ ಅವರು ಯಾವುದೇ ದಾಖಲೆಗಳನ್ನು ಒದಗಿಸದ ಕಾರಣ ಹಾಗೂ ಅವರು ನೀಡಿರುವ ವಿವರಣೆಯನ್ನು ಒಪ್ಪಲು ಯಾವುದೇ ಸಕಾರಣಗಳು ಇಲ್ಲದ ಕಾರಣ ವಿಚಾರಣಾ ವರದಿಯಂತೆ ಆಪಾದಿತರ ಮೇಲಿನ ಸಾಬೀತಾದ ಆರೋಪಗಳಿಗೆ ಅನುಗುಣವಾಗಿ ಆಪಾದಿತರಿಗೆ ಸೂಕ್ತ ದಂಡನೆ ವಿಧಿಸಲು ಸರ್ಕಾರ ನಿರ್ಧರಿಸಿದೆ. ಆಪಾದಿತರು ಸೇವೆಯಿಂದ ನಿವೃತ್ತರಾಗಿರುವುದರಿಂದ ಅವರಿಗೆ ದಂಡನೆ ವಿಧಿಸುವ ಬಗ್ಗೆ ಲೋಕಸೇವಾ ಆಯೋಗದ ಸಹಮತಿ ಕೋರಲಾಗಿದ್ದು, ಆಯೋಗವು ಮೇಲೆ ಓದಲಾದ ಕ್ರಮ ಸಂಖ್ಯೆ (8)ರ ಪತ್ರದಲ್ಲಿ ತನ್ನ ಸಹಮತಿ ನೀಡಿದೆ. ಕಾರಣ ಈ ಆದೇಶ.

**ಆದೇಶ ಸಂಖ್ಯೆ ಗ್ರಾಅಪ 99 ಇಎನ್‌ಕ್ಯೂ 97, ಬೆಂಗಳೂರು, ದಿನಾಂಕ: 4ನೇ ಮಾರ್ಚ್ 2004**

ಪ್ರಸ್ತಾವನೆಯಲ್ಲಿ ವಿವರಿಸಲಾದ ಅಂಶಗಳ ಹಿನ್ನೆಲೆಯಲ್ಲಿ ಬಿಜಾಪುರ ಜಿಲ್ಲೆ ಮುದೋಳ ತಾಲ್ಲೂಕಿನ ಡವಳೇಶ್ವರ, ಹಳಕಿ-ನಿಂಗಾಪುರ ಗ್ರಾಮಗಳಲ್ಲಿನ ಕುಡಿಯುವ ನೀರಿನ ಯೋಜನೆಗಳಲ್ಲಿ ಹಾಗೂ ಮೆಟಗುಡ್ಡ ಮಂಡಲ ಪಂಚಾಯತಿ ವ್ಯಾಪ್ತಿಯ ಚಿಚಕಂಡಿ ಗ್ರಾಮದಲ್ಲಿ ಜವಾಹರ್ ರೋಜಗಾರ್ ಯೋಜನೆಯಡಿ ಫರಸಿ ಕಾಮಗಾರಿಗಳಲ್ಲಿ ಆಗಿರುವ ಹಣ ದುರುಪಯೋಗ ಸಾಬೀತಾದ ಆಪಾದನೆಗಳಿಗೆ ಈ ಕೆಳಕಂಡಂತೆ ದಂಡನೆ ವಿಧಿಸಲು ಸರ್ಕಾರ ಆದೇಶಿಸಿದೆ.

| ಕ್ರ. ಸಂ. | ಆಪಾದಿತರ ಹೆಸರು ಮತ್ತು ಪದನಾಮ | ವಿಧಿಸಲಾಗಿರುವ ದಂಡನೆ |
|---|---|---|
| 1 | ಶ್ರೀ ವಿ.ಎಂ. ದೊಡ್ಡಮನಿ, ಅಂದಿನ ಸಹಾಯಕ ಕಾರ್ಯಪಾಲಕ ಇಂಜಿನಿಯರ್, ಜಿ.ಪಂ.ಇಂ. ಉಪವಿಭಾಗ, ಮುದೋಳ (ಪ್ರಸ್ತುತ ನಿವೃತ್ತ) | ಆಪಾದನೆ 1ರಂತೆ ಹಣ ದುರುಪಯೋಗದ ಆರೋಪದ ಸಾಬೀತಾದ ಬಾಬ್ತು ಕರ್ನಾಟಕ ಸರ್ಕಾರಿ ಸೇವಾ ನಿಯಮಾವಳಿಗಳ ನಿಯಮ 213ರಂತೆ, 2,54,571-00 ರೂ.ಗಳ ಬಾಬ್ತು ಶೇಕಡಾ 60ರಷ್ಟನ್ನು ಅಂದರೆ 1,52,742-60ರೂ.ಗಳನ್ನು (ರೂಪಾಯಿ ಒಂದು ಲಕ್ಷ ಐವತ್ತೆರಡು ಸಾವಿರದ ಏಳು ನೂರ ನಲವತ್ತೆರಡು ಮತ್ತು ಪೈಸೆ ಅರವತ್ತು) ಮಾತ್ರ ಅವರ ಡಿಸಿಆರ್‌ಜಿ ಯಿಂದ ವಸೂಲು ಮಾಡುವುದು. ಹಾಗೂ ಅವರ ಈ ಕರ್ತವ್ಯ ಲೋಪಕ್ಕೆ ಸಂಬಂಧಿಸಿದಂತೆ ಕರ್ನಾಟಕ ಸರ್ಕಾರಿ ಸೇವಾ ನಿಯಮಾವಳಿಗಳ ನಿಯಮ 214ರಂತೆ ಅವರ ನಿವೃತ್ತಿ ವೇತನದ ಶೇಕಡ 5ರಷ್ಟನ್ನು 2 ವರ್ಷದ ಅವಧಿಗೆ ತಡೆ ಹಿಡಿಯುವುದು. |
| 2 | ಶ್ರೀ ಡಿ.ಎಂ. ನಾಗರಾಳಮಠ್, ಅಂದಿನ ಕಿರಿಯ ಇಂಜಿನಿಯರ್, ಜಿ.ಪಂ.ಇಂ ಉಪವಿಭಾಗ, ಮುದೋಳ (ಪ್ರಸ್ತುತ ನಿವೃತ್ತ) | ಆಪಾದನೆ 1ರಂತೆ ಹಣ ದುರುಪಯೋಗದ ಆರೋಪದ ಸಾಬೀತಾದ ಬಾಬತ್ತನ್ನು ಕರ್ನಾಟಕ ಸರ್ಕಾರಿ ಸೇವಾ ನಿಯಮಾವಳಿಗಳ ನಿಯಮ 213ರಂತೆ, 2,54,571-00 ರೂ.ಗಳ ಬಾಬ್ತು ಶೇಕಡಾ 40ರಷ್ಟನ್ನು ಅಂದರೆ 1,01,828.40ರೂ.ಗಳನ್ನು (ರೂಪಾಯಿ ಒಂದು ಲಕ್ಷ ಒಂದು ಸಾವಿರದ ಎಂಟು ನೂರ ಇಪ್ಪತ್ತೆಂಟು ಮತ್ತು ಪೈಸೆ ನಲವತ್ತು) ಮಾತ್ರ ಅವರ ಡಿಸಿಆರ್‌ಜಿ ಯಿಂದ ವಸೂಲು ಮಾಡುವುದು. ಹಾಗೂ ಕರ್ತವ್ಯಲೋಪಕ್ಕೆ ಸಂಬಂಧಿಸಿದಂತೆ ಕರ್ನಾಟಕ ಸರ್ಕಾರಿ ಸೇವಾ ನಿಯಮಾವಳಿಗಳ ನಿಯಮ 214ರಂತೆ ಅವರ ನಿವೃತ್ತಿ ವೇತನದ ಶೇಕಡ 5ರಷ್ಟನ್ನು 2 ವರ್ಷದ ಅವಧಿಗೆ ತಡೆ ಹಿಡಿಯುವುದು. |
| 3 | ಶ್ರೀ ಬಿ.ಎಸ್. ಪಟ್ಟಣ, ಅಂದಿನ ಮಂಡಲ ಪಂಚಾಯಿತಿ ಕಾರ್ಯದರ್ಶಿ (ಪ್ರಸ್ತುತ ನಿವೃತ್ತ) | ಸದರಿಯವರಿಂದ ಉಂಟಾಗಿರುವ ಆರ್ಥಿಕ ನಷ್ಟದ ಬಾಬ್ತು 10,909-00ರೂ.ಗಳನ್ನು ಪ್ರತಿ ತಿಂಗಳೂ ರೂ.500/- ಗಳಂತೆ 20 ಕಂತುಗಳಲ್ಲಿ ಅವರ ನಿವೃತ್ತಿ ವೇತನದಿಂದ ವಸೂಲು ಮಾಡುವುದು. ಕರ್ತವ್ಯಲೋಪ ಹಾಗೂ ದುರ್ನಡತೆಗಾಗಿ ಕರ್ನಾಟಕ ಸರ್ಕಾರಿ ಸೇವಾ ನಿಯಮಾವಳಿಗಳ ನಿಯಮ 214ರಂತೆ ಅವರ ನಿವೃತ್ತಿ ವೇತನದ ಶೇಕಡ 5ರಷ್ಟನ್ನು ಒಂದು ವರ್ಷದ ಅವಧಿಗೆ ಕಡಿತಗೊಳಿಸುವುದು. |

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 302

**ಎ. ಹೊನ್ನಪ್ಪ ನಾಯಕ್**

ಸರ್ಕಾರದ ಅಧೀನ ಕಾರ್ಯದರ್ಶಿ (ಸೇವೆಗಳು-ಎ), ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್ ರಾಜ್ ಇಲಾಖೆ.

**ಸಮಾಜ ಕಲ್ಯಾಣ ಸಚಿವಾಲಯ**

**ವಿಷಯ:** ಅನುಸೂಚಿತ ಜಾತಿಗಳು ಮತ್ತು ಅನುಸೂಚಿತ ಬುಡಕಟ್ಟುಗಳು ಹಾಗೂ ಅವುಗಳಲ್ಲಿನ ಉಪಜಾತಿಗಳಿಗೆ ಒಳಮೀಸಲಾತಿ ಕಲ್ಪಿಸುವ ಕುರಿತು ನೇಮಕವಾಗಿರುವ ಒರಿಸ್ಸಾ ರಾಜ್ಯದ ಶ್ರೇಷ್ಠನ್ಯಾಯಾಲಯದ ನಿವೃತ್ತ ಮುಖ್ಯ ನ್ಯಾಯಮೂರ್ತಿಗಳಾದ ಶ್ರೀ ಎನ್.ವೈ. ಹನುಮಂತಪ್ಪ ಇವರಿಗೆ ವೇತನ ನಿಗದಿಪಡಿಸುವ ಕುರಿತು.

**ಓದಲಾಗಿದೆ:** ಸರ್ಕಾರಿ ಅಧಿಸೂಚನೆ ಸಂಖ್ಯೆ ಸಕಇ 227 ಎಸ್.ಎ.ಡಿ 2003 ದಿನಾಂಕ:7-1-2004

**ಪ್ರಸ್ತಾವನೆ:**

ಮೇಲೆ ಓದಲಾದ ದಿ:7-1-2004ರ ಸರ್ಕಾರಿ ಅಧಿಸೂಚನೆಯಲ್ಲಿ ವಿಚಾರಣಾ ಆಯೋಗದ ಅಧಿನಿಯಮ 1952 ರ ಕಲಂ 3 ರ ಮೇರೆಗೆ ಒರಿಸ್ಸಾ ರಾಜ್ಯದ ಶ್ರೇಷ್ಠ ನ್ಯಾಯಾಲಯದ ನಿವೃತ್ತ ಮುಖ್ಯನ್ಯಾಯಾಧೀಶರಾದ ನ್ಯಾಯಮೂರ್ತಿ ಶ್ರೀ ಎನ್.ವೈ. ಹನುಮಂತಪ್ಪ ರವರನ್ನು ಕರ್ನಾಟಕ ರಾಜ್ಯದಲ್ಲಿನ ಅನುಸೂಚಿತ ಜಾತಿಗಳು ಅನುಸೂಚಿತ ಬುಡಕಟ್ಟುಗಳು ಹಾಗೂ ಅವುಗಳಿಗೆ ಸಂಬಂಧಿಸಿದ ಉಪಜಾತಿಗಳಿಗೆ ಸಂಬಂಧಿಸಿದಂತೆ ಒಳಮೀಸಲಾತಿ ಕಲ್ಪಿಸುವ ಕುರಿತು ಅಧ್ಯಕ್ಷರನ್ನಾಗಿ ನೇಮಕ ಮಾಡಲಾಗಿದೆ. ಸದರಿ ಏಕ ಸದಸ್ಯ ಆಯೋಗದ ಅಧ್ಯಕ್ಷರಿಗೆ ಸಂಬಂಧಿಸಿದಂತೆ ನೀಡುವ ವೇತನ / ಸಂಭಾವನೆ ಕುರಿತಂತೆ ಸರ್ಕಾರವು ಪರಿಶೀಲಿಸಿ ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂ: ಸಕಇ 227 ಎಸ್.ಎ.ಡಿ. 03, ಬೆಂಗಳೂರು, ದಿನಾಂಕ: 26ನೇ ಫೆಬ್ರವರಿ 2004**

ಸರ್ಕಾರವು: ಪ್ರಸ್ತಾವನೆಯಲ್ಲಿ ತಿಳಿಯಪಡಿಸಲಾದ ಅಂಶಗಳನ್ನು ಪರಿಶೀಲಿಸಿದೆ. ಸರ್ಕಾರಿ ಅಧಿಸೂಚನೆ ಸಂ: ಸಕಇ 227 ಎಸ್.ಎ.ಡಿ. 2003 ದಿನಾಂಕ:7.1.2004 ರಲ್ಲಿ ಕರ್ನಾಟಕ ರಾಜ್ಯದಲ್ಲಿನ ಅನುಸೂಚಿತ ಜಾತಿಗಳು ಅನುಸೂಚಿತ ಬುಡಕಟ್ಟುಗಳು ಹಾಗೂ ಉಪಜಾತಿಗಳನ್ನೊಳಗೊಂಡಂತೆ ಒಳಮೀಸಲಾತಿ ಕಲ್ಪಿಸುವ ಕುರಿತು ರಚಿತವಾದ ಏಕ ಸದಸ್ಯ ಆಯೋಗದ ಅಧ್ಯಕ್ಷರನ್ನಾಗಿ ಒರಿಸ್ಸಾ ರಾಜ್ಯದ ಶ್ರೇಷ್ಠನ್ಯಾಯಾಲಯದ ನಿವೃತ್ತ ಮುಖ್ಯನ್ಯಾಯಾಧೀಶರಾದ ಶ್ರೀ ಎನ್.ವೈ. ಹನುಮಂತಪ್ಪ ರವರು ಅಧಿಕ ಕಾರ್ಯಭಾರ ವಹಿಸಿಕೊಂಡ ದಿನಾಂಕದಿಂದ ಮುಖ್ಯ ನ್ಯಾಯಾಧೀಶರ ಮೂಲ ವೇತನವು ರೂ.30,000-00 ಆಗಿರುವ ಅಂಶವನ್ನು ಪರಿಗಣಿಸಿ ಮುಖ್ಯ ನ್ಯಾಯಮೂರ್ತಿಗಳಾದ ಶ್ರೀ ಎನ್.ವೈ. ಹನುಮಂತಪ್ಪ ಅವರಿಗೆ ಅವರ ನಿವೃತ್ತಿ ವೇತನವೂ ಸೇರಿದಂತೆ ಮರುನೇಮಕಾತಿ ವೇತನವನ್ನು ರೂ.30,000-00 ಎಂದು ನಿಗದಿಪಡಿಸಿ ಸರ್ಕಾರ ಆದೇಶ ನೀಡಿದೆ.

ಕಾನೂನಿನಲ್ಲಿ ಮ್ಯಾಲೀಸ್(malice) ಆಗಿರುತ್ತದೆ. ಅನೇಕ ಸರ್ಕಾರಿ ನೌಕರರು ಮತ್ತು ವೈದ್ಯರು ಅನಧಿಕೃತವಾಗಿ ಗೈರುಹಾಜರಾಗಿರುವಾಗ ಅದನ್ನು ಪರಿಗಣಿಸದೇ ಕೇವಲ ಇವರು ಪರಿಶಿಷ್ಟ ಜಾತಿಗೆ ಸೇರಿದವರು ಎಂಬ ಕಾರಣದ ಮೇಲೆ ತಾರತಮ್ಯ ಮಾಡುತ್ತಿರುವುದು ಸ್ಪಷ್ಟವಾಗಿದೆ. 2003ರ ಫೆಬ್ರವರಿಯಲ್ಲಿ ಸ್ವ-ಇಚ್ಛಾ ನಿವೃತ್ತಿಗೆ ಅರ್ಜಿ ಸಲ್ಲಿಸಿದ್ದು ದಿಃ 04.07.2003ರ ವೈದ್ಯಕೀಯ ಶಿಕ್ಷಣ ನಿರ್ದೇಶಕರ ಪತ್ರದಲ್ಲಿ ವಿಚಾರಣಾ ನಡವಳಿ ಬಾಕಿ ಇರುವುದರಿಂದ ಅದನ್ನು ಪರಿಗಣಿಸುವಂತಿಲ್ಲ ಎಂದು ತಿಳಿಯಪಡಿಸಲಾಗಿದೆ. ಅದಕ್ಕೆ ನೀಡಿದ್ದ ಉತ್ತರವನ್ನು ಗಣನೆಗೆ ತೆಗೆದುಕೊಂಡಿಲ್ಲ. ಅಂತಹ ಕ್ರಮವನ್ನು ಕಾನೂನಿನ ರೀತ್ಯಾ ಪ್ರಶ್ನಿಸುವ ಹಕ್ಕನ್ನು ಕಾಯ್ದಿರಿಸಿಕೊಂಡಿದ್ದಾರೆ. ಮೇಲ್ಕಂಡ ವಿವರಣೆಯು ದುರುದ್ದೇಶವನ್ನು ಪ್ರದರ್ಶಿಸುತ್ತದೆ. ಪರಿಶೀಲಿಸಿದ ಮತ್ತು ಸರ್ಕಾರದ ನಿರ್ಣಯವನ್ನು ತಲುಪಲು ಸಾಧ್ಯವಾಗುವುದಿಲ್ಲ. ಆದಕಾರಣ ಸಾಮಾಜಿಕ ನ್ಯಾಯ ತತ್ವಗಳ ಅನುಸಾರ ದಿಃ 27.08.2003ರ 2ನೇ ಕಾರಣಕೇಳುವ ನೋಟೀಸ್‌ನ್ನು ಹಿಂತೆಗೆದುಕೊಂಡು ಮುಂದಿನ ಎಲ್ಲಾ ನಡವಳಿಗಳನ್ನು ಕೈಬಿಡುವಂತೆ ವಿನಂತಿಸಿದ್ದಾರೆ.

6. ಆಪಾದಿತರು ಈಗಲೂ ಸಹ ಕರ್ತವ್ಯದ ಮೇಲಿಲ್ಲ. ದಿಃ 27.08.2001ರಿಂದ 26.11.2002ರವರೆಗೆ ದಿಃ 30.01.2003 ರಿಂದ 29.04.2003ರವರೆಗೆ ರಜೆಗೆ ಅರ್ಜಿಸಲ್ಲಿಸಿ ದಿಃ 30.04.2003ರಿಂದ ಅನಧಿಕೃತ ಗೈರುಹಾಜರಾಗಿರುತ್ತಾರೆ. ದಿಃ 27.11.2002ರಿಂದ 28.01.2003ರವರೆಗೆ ಮತ್ತು 29.01.2003ರಂದು ಮಾತ್ರ ಕರ್ತವ್ಯನಿರತರಾಗಿದ್ದರು. ಅವರು ಪ್ರತಿವಾದಿಸಿರುವ ಎಲ್ಲಾ ಅಂಶಗಳನ್ನು ಈಗಾಗಲೇ ಕೂಲಂಕುಷವಾಗಿ ಮತ್ತು ಸವಿವರವಾಗಿ ಪರಿಶೀಲಿಸಲಾಗಿದೆ. ಅವರನ್ನು ಬೆಂಗಳೂರು ವೈದ್ಯಕೀಯ ಕಾಲೇಜಿನಲ್ಲಿ ಕರ್ತವ್ಯಕ್ಕೆ ತೆಗೆದುಕೊಳ್ಳದಿದ್ದಲ್ಲಿ ಬೆಂಗಳೂರಿನಲ್ಲಿಯೇ ಇರುವ ವೈದ್ಯಕೀಯ ಶಿಕ್ಷಣ ನಿರ್ದೇಶಕರನ್ನಾಗಲಿ ಅಥವಾ ಸರ್ಕಾರವನ್ನಾಗಲಿ ಸಂಪರ್ಕಿಸಲು ಯಾವುದೇ ತೊಡಕುಗಳು ಇರಲಿಲ್ಲ. ಆದಾಗ್ಯೂ ಅವರ ಅರ್ಜಿಯನ್ನು ಆಧರಿಸಿ ಅವರಿಗೆ ಮೈಸೂರು ವೈದ್ಯಕೀಯ ಕಾಲೇಜಿನಲ್ಲಿ ಸ್ಥಳನಿಯುಕ್ತಿ ನೀಡಲಾಗಿತ್ತು ಅವರು ಅಲ್ಲಿ ದಿಃ 25.08.2001ರಂದು ಕಾರ್ಯಭಾರವಹಿಸಿಕೊಂಡರು. ದಿಃ 27.08.2001 ರಿಂದ 26.11.2002ರವರೆಗೆ ರಜೆಗಾಗಿ ಅರ್ಜಿ ಸಲ್ಲಿಸಿದ್ದರು ಮತ್ತೆ ಕೇವಲ 27.11.2002 ರಿಂದ 29.01.2003ರವರೆಗೆ ಕರ್ತವ್ಯ ನಿರ್ವಹಿಸಿ ನಂತರ ರಜೆ ಅರ್ಜಿ ಸಲ್ಲಿಸಿ ಗೈರುಹಾಜರಾಗಿದ್ದಾರೆ. ಇದರಿಂದ ಅಭಿವ್ಯಕ್ತವಾಗುವಂತೆ ಅವರು ಎಷ್ಟರ ಮಟ್ಟಿಗೆ ಕರ್ತವ್ಯಶ್ರದ್ಧೆ ಹೊಂದಿದ್ದರು ಎಂಬುದು ವೇದ್ಯವಾಗುತ್ತದೆ. ಈಗಾಗಲೇ ಈ ಹಿಂದೆ ಸುಸ್ಪಷ್ಟಪಡಿಸಿರುವಂತೆ ಕೇವಲ ರಜೆಗಾಗಿ ಅರ್ಜಿಸಲ್ಲಿಸಿ ಕರ್ತವ್ಯದಿಂದ ಗೈರುಹಾಜರಾದಲ್ಲಿ ಕಾಲೇಜಿನ ವಿದ್ಯಾರ್ಥಿಗಳ ಪಾಠಪ್ರವಚನಗಳಿಗೆ ಮತ್ತು ಕ್ಲಿನಿಕಲ್ ಸೌಲಭ್ಯಗಳಿಗೆ ಅತೀವ ತೊಂದರೆಯಾಗುತ್ತದೆ ಅವರ ವಿರುದ್ಧ ಇಲಾಖಾ ವಿಚಾರಣೆ ಬಾಕಿ ಇರುವುದರಿಂದ ಸ್ವ-ಇಚ್ಛಾ ನಿವೃತ್ತಿ ನೀಡುವುದಕ್ಕೆ ಅವಕಾಶವಿಲ್ಲ.

7. ಸದರಿ ಉಪನ್ಯಾಸಕರು ೩ ವರ್ಷಗಳಿಗೂ ಮೀರಿ ರಜೆ ಮಂಜೂರಾತಿ ಪಡೆಯದೇ ಅನಧಿಕೃತ ಗೈರುಹಾಜರಾಗಿರುತ್ತಾರೆ. ರಜೆ ಅರ್ಜಿಗಳನ್ನು ಆಪಾದಿತರು ಸಲ್ಲಿಸಿದ್ದರೂ ರಜೆ ಮಂಜೂರು ಮಾಡಿ ಯಾವುದೇ ಆದೇಶಗಳನ್ನು ಹೊರಡಿಸಿಲ್ಲದೇ ಇರುವುದರಿಂದ ಅನಧಿಕೃತ ಗೈರುಹಾಜರಿ ಆಪಾದನೆ ರುಜುವಾತು ಆಗಿಲ್ಲವೆಂದು ವಿಚಾರಣಾ ಪ್ರಾಧಿಕಾರ ವರದಿ ಸಲ್ಲಿಸಿದೆ. ರಜೆಗಾಗಿ ಅರ್ಜಿ ಸಲ್ಲಿಸಿದ್ದರು ಎಂಬ ಒಂದೇ ಕಾರಣದಿಂದ ಅನಧಿಕೃತ ಗೈರುಹಾಜರಾಗಿಲ್ಲವೆಂಬ ವರದಿ ಅಂಗೀಕಾರಾರ್ಹವಲ್ಲ. ರಜೆ ಅರ್ಜಿ ನೀಡಿದಾಕ್ಷಣ ರಜೆ ಮಂಜೂರು ಮಾಡಿದಂತಾಗುವುದಿಲ್ಲ. ರಜೆ ಮಂಜೂರು ಆದ ನಂತರವೇ ರಜೆಯ ಮೇಲೆ ತೆರಳಬೇಕು ಆಪಾದಿತರ ಅನಧಿಕೃತ ಗೈರುಹಾಜರಿಯಿಂದ ಮೈಸೂರು ವೈದ್ಯಕೀಯ ಕಾಲೇಜಿನ ಪಾಠ ಪ್ರವಚನಗಳಿಗೆ ಅಡಚಣೆ ಉಂಟಾಗಿತ್ತು, ಅವರ ಪ್ರತಿಪಾದನೆಯು ಅಸಮರ್ಥನೀಯವಾಗಿದೆ.

8. ಕೆಸಿಎಸ್‌ಆರ್‌ನ 108ನೇ ನಿಯಮದೊಂದಿಗೆ ಓದಲಾದ ದಿಃ14.09.2001ಸಂಖ್ಯೆಃಸಿಆಸುಇ 18 ಸೇಇವಿ 2001ರ ಸುತ್ತೋಲೆ ಪ್ರಕಾರ ೪ ತಿಂಗಳು ಮೀರಿದ ಗೈರುಹಾಜರಿಗೆ ಸೇವೆಯಿಂದ ತೆಗೆದುಹಾಕುವ ದಂಡನೆಯನ್ನು ವಿಧಿಸಬೇಕಾಗಿದೆ.

ಸರ್ಕಾರಿ ಆದೇಶ ಸಂಖ್ಯೆಃ ಆಕುಕ 09 ಎಂಸಿಎಲ್ 2004, ಬೆಂಗಳೂರು, ದಿನಾಂಕಃ 23ನೇ ಫೆಬ್ರವರಿ 2004

9. ಮೈಸೂರು ವೈದ್ಯಕೀಯ ಕಾಲೇಜಿನ ಶರೀರಕ್ರಿಯಾಶಾಸ್ತ್ರ ಉಪನ್ಯಾಸಕರಾದ ಈಗ ಹಾಲಿ ಅನಧಿಕೃತ ಗೈರುಹಾಜರಿಯಲ್ಲಿರುವ ಡಾಃಎಸ್.ಶಾರದಾ ರವರ ಮೇಲೆ 1987ರ ಕರ್ನಾಟಕ ನಾಗರೀಕ ಸೇವಾ(ಸಿಸಿಎ) ನಿಯಮಾವಳಿಯ 8(viii) ನೇ ನಿಯಮದಡಿ ಸೇವೆಯಿಂದ ತೆಗೆದುಹಾಕುವ ದಂಡನೆಯನ್ನು ವಿಧಿಸಲಾಗಿದೆ ಮತ್ತು ಅವರನ್ನು ತಕ್ಷಣದಿಂದ ಜಾರಿಗೆ ಬರುವಂತೆ ಸೇವೆಯಿಂದ ವಜಾ ಮಾಡಲಾಗಿದೆ.

10. ಮೈಸೂರು ವೈದ್ಯಕೀಯ ಕಾಲೇಜಿನ ಪ್ರಾಂಶುಪಾಲರು ವಿದ್ಯುಕ್ತವಾದ ಆದೇಶವನ್ನು ಹೊರಡಿಸಿ ಅವರನ್ನು ತಕ್ಷಣದಿಂದ ಜಾರಿಗೆ ಬರುವಂತೆ ಕರ್ತವ್ಯದಿಂದ ವಿಮುಕ್ತಿಗೊಳಿಸಿ ಅದರ ಪ್ರತಿಯನ್ನು ತ್ವರಿತವಾಗಿ ಸರ್ಕಾರ ವೈದ್ಯಕೀಯ ಶಿಕ್ಷಣ ನಿರ್ದೇಶಕರಿಗೆ ಮತ್ತು ಮಹಾಲೇಖಪಾಲರಿಗೆ ಸಲ್ಲಿಸತಕ್ಕದ್ದು.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 313

ಎಸ್. ನಾಗರಾಜು

ಸರ್ಕಾರದ ಅಧೀನ ಕಾರ್ಯದರ್ಶಿ, ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಇಲಾಖೆ (ವೈದ್ಯಕೀಯ ಶಿಕ್ಷಣ)

## ಸಮಾಜ ಕಲ್ಯಾಣ ಸಚಿವಾಲಯ

**ವಿಷಯ:** ಶ್ರೀ ಜಿ. ಸೀತಾರಾಮಪ್ಪ ಸಸ್ಯಶಾಸ್ತ್ರ ಉಪನ್ಯಾಸಕರು, ಮೈಸೂರು ಮಹಾರಾಣಿ ಕಾಲೇಜು, ಶ್ರೀ ವೈ. ಈರಣ್ಣ, ಅರ್ಥಶಾಸ್ತ್ರ ಉಪನ್ಯಾಸಕರು, ಸರ್ಕಾರಿ ಕಲಾ ಕಾಲೇಜು, ತುಮಕೂರು (ಕಾಲೇಜು ಶಿಕ್ಷಣ) ಶಿಕ್ಷಣ ಇಲಾಖೆ ಇವರುಗಳ ಸೇವೆಯನ್ನು ಹಿಂದುಳಿದ ವರ್ಗಗಳ ಇಲಾಖೆಯಲ್ಲಿ ಜಿಲ್ಲಾ ಹಿಂದುಳಿದ ವರ್ಗಗಳ ಮತ್ತು ಅಲ್ಪಸಂಖ್ಯಾತರ ಅಧಿಕಾರಿ ಹುದ್ದೆಯಲ್ಲಿ ವಿಲೀನಗೊಳಿಸುವ ಬಗ್ಗೆ.

**ಓದಲಾಗಿದೆ:**
1. ಪತ್ರ ಸಂಖ್ಯೆ:ಹಿಂವನಿ:ಸಿಬ್ಬಂದಿ-1-ಸಿಆರ್-17-03-04, ದಿನಾಂಕ 22.01.2004.
2. ಪತ್ರ ಸಂಖ್ಯೆ:ಹಿಂವನಿ:ಸಿಬ್ಬಂದಿ-1-ಸಿಆರ್-44-03-04, ದಿನಾಂಕ 22.01.2004.
3. ಶಿಕ್ಷಣ ಇಲಾಖೆಯ ಅ.ಟಿ.ಸಂಖ್ಯೆ:ಇಡಿ 15 ಡಿಸಿಇ 2004 ದಿನಾಂಕ 21.02.2004.
4. ಶಿಕ್ಷಣ ಇಲಾಖೆಯ ಅ.ಟಿ.ಸಂಖ್ಯೆ:ಇಡಿ 14 ಡಿಸಿಇ 2003 ದಿನಾಂಕ 21.02.2004.

**ಪ್ರಸ್ತಾವನೆ:**

ಮೇಲೆ ಓದಲಾದ ಕ್ರಮ ಸಂಖ್ಯೆ (1) ಮತ್ತು (2)ರ ದಿನಾಂಕ 22.01.2004ರ ಪತ್ರದಲ್ಲಿ ಹಿಂದುಳಿದ ವರ್ಗಗಳ ಇಲಾಖೆಯ ಆಯುಕ್ತರು ಶ್ರೀ ಜಿ. ಸೀತಾರಾಮಪ್ಪ, ಸಸ್ಯಶಾಸ್ತ್ರ ಉಪನ್ಯಾಸಕರು, ಮಹಾರಾಣಿ ಕಾಲೇಜು, ಮೈಸೂರು ಶ್ರೀ ವೈ. ಈರಣ್ಣ, ಅರ್ಥಶಾಸ್ತ್ರ ಉಪನ್ಯಾಸಕರು, ಸರ್ಕಾರಿ ಕಲಾ ಕಾಲೇಜು, ತುಮಕೂರು, (ಕಾಲೇಜು ಶಿಕ್ಷಣ) ಶಿಕ್ಷಣ ಇಲಾಖೆ ಇವರುಗಳು ಪ್ರಸ್ತುತ ಹಿಂದುಳಿದ ವರ್ಗಗಳ ಮತ್ತು ಅಲ್ಪಸಂಖ್ಯಾತರ ಜಿಲ್ಲಾ ಅಧಿಕಾರಿಗಳಾಗಿ ಕ್ರಮವಾಗಿ ಮೈಸೂರು, ಚಿತ್ರದುರ್ಗ, ಜಿಲ್ಲೆಗಳಲ್ಲಿ ನಿಯೋಜನೆ ಮೇಲೆ ಕೆಲಸ

ನಿರ್ವಹಿಸುತ್ತಿದ್ದಾರೆ ಎಂಬುದಾಗಿ ವರದಿ ಮಾಡಿ, ಇವರ ಸೇವೆಯನ್ನು ಹಿಂದುಳಿದ ವರ್ಗಗಳ ಇಲಾಖೆಯಲ್ಲಿ ಜಿಲ್ಲಾಹಿಂದುಳಿದ ವರ್ಗಗಳ ಹಾಗೂ ಅಲ್ಪಸಂಖ್ಯಾತರ ಜಿಲ್ಲಾ ಅಧಿಕಾರಿ ಹುದ್ದೆಯಲ್ಲಿ ಖಾಯಂ ಆಗಿ ವಿಲೀನಗೊಳಿಸುವ ಬಗ್ಗೆ ತಮ್ಮ ಅಭಿಪ್ರಾಯವನ್ನು ನೀಡಿ, ಈ ಅಧಿಕಾರಿಗಳು ಶಿಕ್ಷಣ ಇಲಾಖೆಯ ಉಪನ್ಯಾಸಕರಾಗಿ ಕೆಲಸ ನಿರ್ವಹಿಸುತ್ತಿದ್ದು, ಇವರ ಸೇವೆಯನ್ನು ಹಿಂದುಳಿದ ವರ್ಗಗಳ ಇಲಾಖೆಯಲ್ಲಿ ವಿಲೀನಗೊಳಿಸಿದ್ದಲ್ಲಿ, ಇಲಾಖೆಯಲ್ಲಿ ನೇರ ನೇಮಕಾತಿ ಮೂಲಕ ಏಳು ಹುದ್ದೆಗಳನ್ನು ಭರ್ತಿ ಮಾಡುವ ಪ್ರಸ್ತಾವನೆ ಸರ್ಕಾರಕ್ಕೆ ಸಲ್ಲಿಸಿದ್ದು ಈ ಪ್ರಸ್ತಾವನೆ ಸರ್ಕಾರದ ಪರಿಶೀಲನೆಯಲ್ಲಿರುವುದರಿಂದ ಇವರ ಸೇವೆಯನ್ನು ವಿಲೀನಗೊಳಿಸಲು ಅವಕಾಶವಿರುವುದಿಲ್ಲ. ಎಂಬುದಾಗಿ ಅಭಿಪ್ರಾಯ ನೀಡಿ, ಈ ಹಿಂದೆ 4 ಮಂದಿ ಶಿಕ್ಷಣ ಇಲಾಖೆಯ ಉಪನ್ಯಾಸಕರ ಸೇವೆಯನ್ನು ಹಿಂದುಳಿದ ವರ್ಗಗಳ ಇಲಾಖೆಯಲ್ಲಿ ವಿಲೀನಗೊಳಿಸಿದ್ದು, ಸರ್ಕಾರದ ಈ ಕ್ರಮವನ್ನು ಇಲಾಖೆಯ ನೌಕರರು ರಾಜ್ಯ ಉಚ್ಚ ನ್ಯಾಯಾಲಯದಲ್ಲಿ ರಿಟ್ ಅರ್ಜಿ ಸಂಖ್ಯೆ:80829-31/99 ಸಲ್ಲಿಸಿದ್ದು, ಈ ರಿಟ್ ಅರ್ಜಿಯು ನ್ಯಾಯಾಲಯದಲ್ಲಿ ಇನ್ನೂ ಇತ್ಯರ್ಥವಾಗಿರುವುದಿಲ್ಲ ಎಂದು ತಿಳಿಸಿ, ಶ್ರೀ ಜಿ. ಸೀತಾರಾಮಪ್ಪ ಮತ್ತು ಶ್ರೀ ವೈ. ಈರಣ್ಣರವರ ಸೇವೆಯನ್ನು ಹಿಂದುಳಿದ ವರ್ಗಗಳ ಇಲಾಖೆಯಲ್ಲಿ ವಿಲೀನಗೊಳಿಸುವುದು ಸಮಂಜಸವಲ್ಲ ಎಂದು ಅಭಿಪ್ರಾಯ ನೀಡಿರುತ್ತಾರೆ.

ಶ್ರೀ ಜಿ. ಸೀತಾರಾಮಪ್ಪ ಹಾಗೂ ಶ್ರೀ ವೈ. ಈರಣ್ಣ ಇವರುಗಳು ಈಗಾಗಲೇ ಹಿಂದುಳಿದ ವರ್ಗಗಳ ಇಲಾಖೆಯಲ್ಲಿ ಮೈಸೂರು ಮತ್ತು ಚಿತ್ರದುರ್ಗ ಜಿಲ್ಲೆಯಲ್ಲಿ ಕೆಲಸ ಮಾಡುತ್ತಿದ್ದು, ಅವರ ಕಾರ್ಯದಕ್ಷತೆಯೂ ಕೂಡ ಪ್ರಶಂಸನೀಯವಾಗಿದ್ದು, ಅವರು ಕರ್ತವ್ಯವನ್ನು ಅಚ್ಚುಕಟ್ಟಾಗಿ ನಿರ್ವಹಿಸಿಕೊಂಡು ಬಂದಿದ್ದಾರೆ. ಆದ್ದರಿಂದ ಈ ಹುದ್ದೆಗಳನ್ನು ತುಂಬಲು ದಕ್ಷತೆ ಇಲ್ಲದ ಬೇರೆ ಇಲಾಖೆಯ ಅಧಿಕಾರಿಗಳಿಂದ ತುಂಬುವ ಬದಲು ದಕ್ಷತೆ ಇರುವ ಅಧಿಕಾರಿಗಳಿಂದ ತುಂಬುವುದು ಅವಶ್ಯವಾಗಿರುತ್ತದೆ. ಆದುದರಿಂದ ಶ್ರೀ ಜಿ. ಸೀತಾರಾಮಪ್ಪ, ಹಾಗೂ ಶ್ರೀ ವೈ. ಈರಣ್ಣ ಇವರುಗಳನ್ನು ಹಿಂದುಳಿದ ವರ್ಗಗಳ ಇಲಾಖೆಯಲ್ಲಿ ವಿಲೀನಗೊಳಿಸಲು ಹಾಗೂ ಈ ಹಿಂದೆ ಹಿಂದುಳಿದ ವರ್ಗಗಳ ಇಲಾಖೆಯಲ್ಲಿ ಶಿಕ್ಷಣ ಇಲಾಖೆಯ ಅಧಿಕಾರಿಗಳನ್ನು ವಿಲೀನಗೊಳಿಸುವಾಗ ವಿಧಿಸಲಾದ ಷರತ್ತುಗಳನ್ನು ಈ ಪ್ರಕರಣದಲ್ಲಿಯೂ ವಿಧಿಸಿ, ಶ್ರೀ ಜಿ. ಸೀತಾರಾಮಪ್ಪ, ಉಪನ್ಯಾಸಕರು, ಮತ್ತು ಶ್ರೀ ವೈ. ಈರಣ್ಣ, ಉಪನ್ಯಾಸಕರು, ಶಿಕ್ಷಣ ಇಲಾಖೆ, ಇವರ ಸೇವೆಯನ್ನು ವಿಲೀನಗೊಳಿಸುವ ಬಗ್ಗೆ ಪರಿಶೀಲಿಸಲಾಗಿದೆ.

ಮೇಲೆ (3) ಮತ್ತು (4) ರಲ್ಲಿ ಓದಲಾಗಿರುವ ಅನಧಿಕೃತ ಟಿಪ್ಪಣಿಯಲ್ಲಿ ಶ್ರೀ ಜಿ. ಸೀತಾರಾಮಪ್ಪ, ಜಿಲ್ಲಾ ಅಧಿಕಾರಿ, ಜಿಲ್ಲಾ ಹಿಂದುಳಿದ ವರ್ಗಗಳ ಮತ್ತು ಅಲ್ಪಸಂಖ್ಯಾತರ ಇಲಾಖೆ, ಮೈಸೂರು, ಶ್ರೀ ವೈ. ಈರಣ್ಣ, ಜಿಲ್ಲಾ ಅಧಿಕಾರಿ, ಜಿಲ್ಲಾ ಹಿಂದುಳಿದ ವರ್ಗಗಳ ಮತ್ತು ಅಲ್ಪಸಂಖ್ಯಾತರ ಇಲಾಖೆ, ಚಿತ್ರದುರ್ಗ ಇವರ ಸೇವೆಯನ್ನು ಹಿಂದುಳಿದ ವರ್ಗಗಳ ಇಲಾಖೆಯ ಈ ಹುದ್ದೆಯ ಕಾಲಿಕ ವೇತನ ಶ್ರೇಣಿಯಲ್ಲಿ ಕೆಲಸ ನಿರ್ವಹಿಸುವ ಷರತ್ತಿಗೆ ಒಳಪಟ್ಟು ಇವರ ಸೇವೆಯನ್ನು ಹಿಂದುಳಿದ ವರ್ಗಗಳ ಇಲಾಖೆಯಲ್ಲಿ ವಿಲೀನಗೊಳಿಸಲು ಅನುಮತಿ ನೀಡಿರುತ್ತದೆ.

ಸರ್ಕಾರವು ಈ ಪ್ರಸ್ತಾವನೆಯನ್ನು ಕೂಲಂಕುಷವಾಗಿ ಪರಿಶೀಲಿಸಿದೆ. ಆದುದರಿಂದ ಸರ್ಕಾರದ ಆದೇಶದ ಭಾಗದಲ್ಲಿ ವಿಧಿಸಿರುವ ನಿಬಂಧನೆಗಳಿಗೆ ಒಳಪಟ್ಟು, ಶ್ರೀ ಜಿ. ಸೀತಾರಾಮಪ್ಪ, ಸಸ್ಯಶಾಸ್ತ್ರ ಉಪನ್ಯಾಸಕರು ಮಹಾರಾಣಿ ಕಾಲೇಜು, ಮೈಸೂರು, ಶ್ರೀ ವೈ. ಈರಣ್ಣ, ಅರ್ಥಶಾಸ್ತ್ರ ಉಪನ್ಯಾಸಕರು, ಸರ್ಕಾರಿ ಕಲಾ ಕಾಲೇಜು, ತುಮಕೂರು, (ಕಾಲೇಜು ಶಿಕ್ಷಣ) ಶಿಕ್ಷಣ ಇಲಾಖೆ ಇವರುಗಳು ಈಗಾಗಲೇ ಹಿಂದುಳಿದ ವರ್ಗಗಳ ಇಲಾಖೆಯಲ್ಲಿ ನಿಯೋಜನೆ ಮೇಲೆ ಸೇವೆ ಸಲ್ಲಿಸುತ್ತಿದ್ದು, ಇವರ ಸೇವೆಯನ್ನು ಹಿಂದುಳಿದ ವರ್ಗಗಳ ಇಲಾಖೆಯಲ್ಲಿ ಜಿಲ್ಲಾ ಹಿಂದುಳಿದ ವರ್ಗಗಳ ಹಾಗೂ ಅಲ್ಪಸಂಖ್ಯಾತರ ಜಿಲ್ಲಾ ಅಧಿಕಾರಿ ಹುದ್ದೆಯಲ್ಲಿ ವಿಲೀನಗೊಳಿಸಲು ಸರ್ಕಾರವು ತೀರ್ಮಾನಿಸಿದೆ. ಆದುದರಿಂದ ಈ ಆದೇಶ

**ಸರ್ಕಾರಿ ಆದೇಶ ಸಂ: ಸಕಇ 10 ಬಿಇಟಿ 2004, ಬೆಂಗಳೂರು, ದಿನಾಂಕ: 28ನೇ ಫೆಬ್ರವರಿ 2004**

ಶ್ರೀ ಜಿ. ಸೀತಾರಾಮಪ್ಪ, ಸಸ್ಯಶಾಸ್ತ್ರ ಉಪನ್ಯಾಸಕರು, ಮಹಾರಾಣಿ ಕಾಲೇಜು, ಮೈಸೂರು ಮತ್ತು ಶ್ರೀ ವೈ. ಈರಣ್ಣ ಅರ್ಥಶಾಸ್ತ್ರ ಉಪನ್ಯಾಸಕರು, ಸರ್ಕಾರಿ ಕಲಾ ಕಾಲೇಜು, ತುಮಕೂರು, (ಕಾಲೇಜು ಶಿಕ್ಷಣ) ಶಿಕ್ಷಣ ಇಲಾಖೆ ಇವರ ಸೇವೆಯನ್ನು ಕೆಳಕಂಡ ನಿಬಂಧನೆಗಳಿಗೆ ಒಳಪಟ್ಟು ಹಿಂದುಳಿದ ವರ್ಗಗಳ ಇಲಾಖೆಯಲ್ಲಿ ಜಿಲ್ಲಾ ಹಿಂದುಳಿದ ವರ್ಗಗಳ ಮತ್ತು ಅಲ್ಪಸಂಖ್ಯಾತರ ಜಿಲ್ಲಾ ಅಧಿಕಾರಿ ನೇರ ನೇಮಕಾತಿ ಹುದ್ದೆಯಲ್ಲಿ ಕೆಳಕಂಡ ನಿಬಂಧನೆಗಳಿಗೆ ಒಳಪಟ್ಟು ಖಾಯಂ ಆಗಿ ವಿಲೀನಗೊಳಿಸಿ, ಸರ್ಕಾರವು ಆದೇಶಿಸಿರುತ್ತದೆ.

1. ಶ್ರೀ ಜಿ. ಸೀತಾರಾಮಪ್ಪ ಮತ್ತು ಶ್ರೀ ವೈ. ಈರಣ್ಣ ರವರ ವೇತನವನ್ನು ಹಿಂದುಳಿದ ವರ್ಗಗಳ ಇಲಾಖೆಯ ಜಿಲ್ಲಾ ಹಿಂದುಳಿದ ವರ್ಗಗಳ ಹಾಗೂ ಅಲ್ಪಸಂಖ್ಯಾತರ ಜಿಲ್ಲಾ ಅಧಿಕಾರಿ ಹುದ್ದೆಯ ಕಾಲಿಕ ವೇತನ ಶ್ರೇಣಿ ರೂ.7400-13120ರ ಕನಿಷ್ಟ ವೇತನಕ್ಕೆ ನಿಗದಿಪಡಿಸಿದೆ.

2. ಇವರು ಎರಡು ವರ್ಷಗಳ ಅವಧಿಯಲ್ಲಿ ಸದರಿ ಹುದ್ದೆಗೆ ನಿಗದಿಪಡಿಸಿರುವ ಇಲಾಖಾ ಪರೀಕ್ಷೆಗಳಲ್ಲಿ ತೇರ್ಗಡೆಯಾಗತಕ್ಕದ್ದು.

3. ಇವರ ಜೇಷ್ಠತೆಯನ್ನು ಕರ್ನಾಟಕ ಸರ್ಕಾರಿ ನೌಕರರ (ಜೇಷ್ಠತೆ) ನಿಯಮಗಳು 1957ರ ನಿಯಮ 6ರ ಮೊದಲನೇ ಪರಂತುಕದ ಅನುಸಾರ ನಿಗದಿಪಡಿಸತಕ್ಕದ್ದು.

4. ಶ್ರೀ ಜಿ. ಸೀತಾರಾಮಪ್ಪ, ಸಸ್ಯಶಾಸ್ತ್ರ ಉಪನ್ಯಾಸಕರು, ಮಹಾರಾಣಿ ಕಾಲೇಜು, ಮೈಸೂರು ಮತ್ತು ಶ್ರೀ ವೈ. ಈರಣ್ಣ, ಅರ್ಥಶಾಸ್ತ್ರ ಉಪನ್ಯಾಸಕರು ಸರ್ಕಾರಿ ಕಲಾ ಕಾಲೇಜು, ತುಮಕೂರು, (ಕಾಲೇಜು ಶಿಕ್ಷಣ ಇಲಾಖೆ) ಇವರುಗಳು ಹಿಂದುಳಿದ ಮತ್ತು ವರ್ಗಗಳ ಇಲಾಖೆಯಲ್ಲಿ ಪ್ರಸ್ತುತ ಕ್ರಮವಾಗಿ ಜಿಲ್ಲಾ ಹಿಂದುಳಿದ ವರ್ಗಗಳ ಹಾಗೂ ಅಲ್ಪಸಂಖ್ಯಾತರ ಜಿಲ್ಲಾ ಅಧಿಕಾರಿಗಳಾಗಿ ಮೈಸೂರು ಮತ್ತು ಚಿತ್ರದುರ್ಗ ಜಿಲ್ಲೆಗಳಲ್ಲಿ ನಿಯೋಜನೆ ಮೇಲೆ ಸೇವೆ ಸಲ್ಲಿಸುತ್ತಿದ್ದು ಇವರುಗಳು ಶಿಕ್ಷಣ ಇಲಾಖೆಯಲ್ಲಿ ಧಾರಣ ಮಾಡಿರುವ ಹುದ್ದೆಯ ಯು.ಜಿ.ಸಿ. ವೇತನ ಶ್ರೇಣಿ ರೂ.12000-420-18300 ಆಗಿದ್ದು, ಹಿಂದುಳಿದ ವರ್ಗಗಳ ಇಲಾಖೆಯಲ್ಲಿ ವಿಲೀನಗೊಳಿಸಲು ಉದ್ದೇಶಿಸಿರುವ ಹುದ್ದೆಯ ಕಾಲಿಕ ವೇತನ ಶ್ರೇಣಿ ರೂ.7400-13120 ಇದ್ದು ಸದರಿ ವೇತನ ಶ್ರೇಣಿಯಲ್ಲಿ ತಮ್ಮ ವೇತನವನ್ನು ನಿಗದಿಪಡಿಸಲು ಅಧಿಕಾರಿಗಳು ಒಪ್ಪಿದ್ದು, ಅದರಂತೆ ವೇತನ ನಿಗದಿಪಡಿಸಲಾಗುವುದು.

5. ಈ ವಿಲೀನಕ್ಕೆ ಕಾಲೇಜು ಶಿಕ್ಷಣ ಇಲಾಖೆ ಹಾಗೂ ಸಮಾಜ ಕಲ್ಯಾಣ ಇಲಾಖೆಯ ಒಪ್ಪಿಗೆ ಇರುತ್ತದೆ.

6. ಈ ವಿಲೀನವನ್ನು ಅಧಿಕಾರಿಗಳ ಕೋರಿಕೆಯ ಮೇರೆಗೆ ಮಾಡಿರುವುದರಿಂದ ಇವರು ವರ್ಗಾವಣೆ ಭತ್ಯೆ ಪಡೆಯಲು ಅರ್ಹರಿರುವುದಿಲ್ಲ.

7. ಈ ವಿಲೀನವನ್ನು ಈ ಅಧಿಕಾರಿಗಳ ಸೇವಾ ಅವಧಿಯಲ್ಲಿ ಒಮ್ಮೆ ಮಾತ್ರ ಮಾಡಲಾಗಿದೆ.

8. ಇವರು ಹಿರಿಯ ಶ್ರೇಣಿ ಉಪನ್ಯಾಸಕರಾಗಿ ಮುಂಬಡ್ತಿ ಪಡೆದಿರುವುದರಿಂದ ಖಾಯಂಪೂರ್ವ ಘೋಷಣೆಯ ಪ್ರಮೇಯ ಉದ್ಭವಿಸುವುದಿಲ್ಲ.

ಈ ಆದೇಶವನ್ನು ಸಂಖ್ಯೆ:ಸಿಆಸುಇ 392 ಸೇನಿಎ 2004, ದಿನಾಂಕ: 28.02.2004 ರಲ್ಲಿ ಸಿಬ್ಬಂದಿ ಮತ್ತು ಆಡಳಿತ ಸುಧಾರಣಾ ಇಲಾಖೆ ನೀಡಿರುವ ಸಹಮತಿ ಮೇರೆಗೆ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 314 **ಎಂ.ಎಸ್. ಮರುಳಸಿದ್ದಯ್ಯ**

ಸರ್ಕಾರದ ಅಧೀನ ಕಾರ್ಯದರ್ಶಿ, ಸಮಾಜ ಕಲ್ಯಾಣ ಇಲಾಖೆ.

## ಕಾನೂನು ಸಚಿವಾಲಯ

**ವಿಷಯ:** ಶ್ರೀ ಕೆ.ಬಿ. ದೇಸಾಯಿ, ಸಹಾಯಕ ಅಭಿಯೋಗ ನಿರ್ದೇಶಕರು, ಗದಗ್ (ಹಿಂದಿನ ಸಹಾಯಕ ಅಭಿಯೋಗ ನಿರ್ದೇಶಕರು, ಕೆ.ಜಿ.ಎಫ್) ಇವರ ವಿರುದ್ದದ ಆರೋಪಗಳ ಬಗ್ಗೆ ಇಲಾಖಾ ವಿಚಾರಣೆ ನಡೆಸಲು ವಿಚಾರಣಾ ಪ್ರಾಧಿಕಾರಿ ಹಾಗೂ ಅಭಿಯೋಕ್ತಧಿಕಾರಿಯಾಗಿ ನೇಮಿಸುವ ಬಗ್ಗೆ.

**ಓದಲಾಗಿದೆ:**
1. ನಿರ್ದೇಶಕರು, ಅಭಿಯೋಗ ಮತ್ತು ಸರ್ಕಾರಿ ವ್ಯಾಜ್ಯಗಳ ಇಲಾಖೆ ಬೆಂಗಳೂರು ಇವರ ಪತ್ರ ಸಂ:ಡಿಪಿಎನ್: ಕೇಂಸ:ಬಿ-52:2000-01 ದಿನಾಂಕ:18-6-01.
2. ಕಾರಣ ಕೇಳುವ ತಿಳುವಳಿಕೆ ಪತ್ರ ಸಂ:ಲಾ 238 ಪಿಪಿಇ 01, ದಿನಾಂಕ:27-4-2002.
3. ಶ್ರೀ ಕೆ.ಬಿ. ದೇಸಾಯಿ, ಸಹಾಯಕ ಅಭಿಯೋಗ ನಿರ್ದೇಶಕರು, ಗದಗ್ ರವರ ಪತ್ರ ದಿನಾಂಕ:1-6-02.
4. ಸರ್ಕಾರದ ಆದೇಶ ಸಂ.ಸಿಆಸುಇ 3 ಸೇಇವಿ 98, ದಿನಾಂಕ:24-4-98.

**ಪ್ರಸ್ತಾವನೆ:**

ಶ್ರೀ ಕೆ.ಬಿ. ದೇಸಾಯಿ, ಸಹಾಯಕ ಅಭಿಯೋಗ ನಿರ್ದೇಶಕರು, ಗದಗ್ ಇವರು ಈ ಹಿಂದೆ ಕೆ.ಜಿ.ಎಫ್ ನಲ್ಲಿ ಸಹಾಯಕ ಅಭಿಯೋಗ ನಿರ್ದೇಶಕರಾಗಿ ಕಾರ್ಯನಿರ್ವಹಿಸುತ್ತಿದ್ದ, ಸಂದರ್ಭದಲ್ಲಿ ಕೆ.ಜಿ.ಎಫ್ ಅಡಿಷನಲ್ ಜೆಎಂಎಫ್‌ಸಿ ನ್ಯಾಯಾಲಯದ ಪ್ರಭಾರ ಸಹಾಯಕ ಸರ್ಕಾರಿ ಅಭಿಯೋಜಕರಾಗಿ ಕರ್ತವ್ಯ ನಿರ್ವಹಿಸುತ್ತಿದ್ದಾಗಿ ಇವರ ಮೇಲೆ ಲಂಚಗುಳಿತನ, ಸ್ವಜನ ಪಕ್ಷಪಾತ, ಜಾತೀಯತೆ, ಕರ್ತವ್ಯ ಭ್ರಷ್ಟತೆ ಮುಂತಾದ ದೂರುಗಳು ಬಂದ ಹಿನ್ನೆಲೆಯಲ್ಲಿ ಸದರಿಯವರ ವಿರುದ್ಧ ಶಿಸ್ತು ಕ್ರಮ ಜರುಗಿಸುವಂತೆ ಮೇಲೆ ಓದಲಾದ (1)ರಲ್ಲಿ ಅಭಿಯೋಗ ನಿರ್ದೇಶಕರು ಸರ್ಕಾರವನ್ನು ಕೋರಿದ್ದರು.

ಮೇಲೆ ಓದಲಾದ ಕ್ರಮಾಂಕ (2)ರ ಕಾರಣ ಕೇಳುವ ತಿಳುವಳಿಕೆ ಪತ್ರಕ್ಕೆ ದೋಷಾರೋಪಣಾ ಪಟ್ಟಿ ಅನುಬಂಧ-1 ರಿಂದ 4 ವರೆಗೆ ಲಗತ್ತಿಸಿ ಜಾರಿಮಾಡಿ ತಮ್ಮ ವಿರುದ್ದದ ಆಪಾದನೆಗಳನ್ನು ಒಪ್ಪುವ ಅಥವಾ ನಿರಾಕರಿಸುವ ಬಗ್ಗೆ ಪ್ರತಿವಾದದ ಲಿಖಿತ ಹೇಳಿಕೆಯನ್ನು ಕಾರಣ ಕೇಳುವ ತಿಳುವಳಿಕೆ ಪತ್ರ ತಲುಪಿದ 15 ದಿವಸಗಳೊಳಗಾಗಿ ಸಲ್ಲಿಸಲು ತಪ್ಪಿದಲ್ಲಿ ತಮ್ಮ ಪ್ರತಿವಾದದ ಹೇಳಿಕೆ ಏನು ಇಲ್ಲ ಎಂದು ಭಾವಿಸಿ ಸಿಸಿಎ ನಿಯಮಾವಳಿ 1957ರ ನಿಯಮ 11 ಅಥವಾ 12 ರ ಮೇರೆಗೆ ಮುಂದಿನ ಕ್ರಮ ಜರುಗಿಸಲಾಗುವುದೆಂದು ತಿಳಿಯಪಡಿಸಲಾಗಿತ್ತು.

ಮೇಲೆ ಓದಲಾದ ಕ್ರಮಾಂಕ (3)ರಲ್ಲಿ ಆಪಾದಿತರು ಸರ್ಕಾರಕ್ಕೆ ಪತ್ರ ಬರೆದು ಸರ್ಕಾರದ ಕಾರಣ ಕೇಳುವ ತಿಳುವಳಿಕೆ ಪತ್ರ ದಿನಾಂಕ:18-5-02 ರಂದು ತಲುಪಿರುವುದಾಗಿ ತಿಳಿಸಿ ತಮ್ಮ ಮೇಲಿನ ಆರೋಪಗಳನ್ನು ಸ್ಪಷ್ಟವಾಗಿ ಮತ್ತು ನಿರ್ದಿಷ್ಟವಾಗಿ ಅಲ್ಲಗೆಳೆಯುತ್ತೇನೆಂದೂ ಹಾಗೂ ಸದರಿ ಆರೋಪಗಳಿಗೆ ಸಂಬಂಧಿಸಿದಂತೆ ಕೆ.ಜಿ.ಎಫ್‌ಗೆ ತೆರಳಿ ಮಾಹಿತಿಯನ್ನು ಪಡೆದುಕೊಂಡು ದಾಖಲೆಗಳನ್ನು ಪರಿಶೀಲಿಸಿ ತಿಳುವಳಿಕೆ ಪತ್ರಕ್ಕೆ ಉತ್ತರಿಸಲು 2 ತಿಂಗಳ ವಾಯಿದೆಯನ್ನು ನೀಡಲು ಕೋರಿದ್ದು, ಉತ್ತರ ಸಲ್ಲಿಸದೇ ಒಂದಲ್ಲ ಒಂದು ಕಾರಣದಿಂದ ವಾಯಿದೆಯನ್ನು ಪದೇ ಪದೇ ಕೋರುತ್ತ ಬಂದಿದ್ದು ಇದುವರೆವಿಗೂ ಉತ್ತರ ಸಲ್ಲಿಸದೇ ಇರುವುದರಿಂದ ಹಾಗೂ ಮೇಲೆ ತಿಳಿಸಿದಂತೆ ಆರೋಪಿತರು ತಮ್ಮ ಮೇಲಿನ ಆರೋಪಗಳನ್ನು ಸ್ಪಷ್ಟವಾಗಿ ಮತ್ತು ನಿರ್ದಿಷ್ಟವಾಗಿ ಅಲ್ಲಗಳೆದಿರುವುದರಿಂದ ಪ್ರಕರಣದ ಸತ್ಯ ಸತ್ಯಾತೆಯನ್ನು ಕಂಡುಕೊಳ್ಳುವ ಹಿತದೃಷ್ಟಿಯಿಂದ ಸದರಿ ಆರೋಪಿತ ಅಧಿಕಾರಿಯ ವಿರುದ್ಧ ಇಲಾಖಾ ವಿಚಾರಣೆಯನ್ನು ಕೈಗೊಳ್ಳಲು ನಿರ್ಧರಿಸಿ ಕೆಳಕಂಡಂತೆ ಸರ್ಕಾರವು ವಿಚಾರಣಾ ಪ್ರಾಧಿಕಾರವನ್ನು ಮತ್ತು ಅಭಿಯೋಕ್ತ ಅಧಿಕಾರಿಯನ್ನು ನೇಮಿಸಿ ಆದೇಶ ಹೊರಡಿಸಿದೆ.

### ಸರ್ಕಾರಿ ಆದೇಶ ಸಂ. ಲಾ 238 ಪಿಪಿಇ 2001, ಬೆಂಗಳೂರು, ದಿನಾಂಕ: 28ನೇ ಅಕ್ಟೋಬರ್ 2003

ಶ್ರೀ ಕೆ.ಬಿ. ದೇಸಾಯಿ, ಸಹಾಯಕ ಅಭಿಯೋಗ ನಿರ್ದೇಶಕರು, ಗದಗ್ (ಹಿಂದಿನ ಸಹಾಯಕ ಅಭಿಯೋಗ ನಿರ್ದೇಶಕರು ಕೆ.ಜಿ.ಎಫ್) ಇವರ ವಿರುದ್ದದ ಆಪಾದನೆಗಳ ಬಗ್ಗೆ ಕೆಸಿಎಸ್ (ಸಿಸಿಎ) ನಿಯಮಾವಳಿ 1957 ರ ನಿಯಮ 11 ರ ಉಪನಿಯಮ (2) ರನ್ವಯ ಹಾಗೂ ಸಿಬ್ಬಂದಿ ಮತ್ತು ಆಡಳಿತ ಸುಧಾರಣೆಯನ್ನು ಇಲಾಖೆಯ ಆದೇಶ ಸಂ:ಸಿಆಸುಇ 3 ಸೇಇವಿ 96, ದಿನಾಂಕ:24-4-98 ರನ್ವಯ ಇಲಾಖಾ ವಿಚಾರಣೆಯನ್ನು ನಡೆಸಲು ಸದರಿ ನಿಯಮಾವಳಿ ನಿಯಮ 11 ಮತ್ತು 11(ಎ) ರನ್ವಯ ಪ್ರತಿ ಪ್ರಕರಣಕ್ಕೆ ರೂ.5,000-00 (ರೂಪಾಯಿ ಐದು ಸಾವಿರ ಮಾತ್ರ)ಗಳ ಸಂಚಿತ ಸಂಭಾವನೆ ಹಾಗೂ ಪ್ರತಿ ಪ್ರಕರಣಕ್ಕೆ ರೂ. 1000-00 (ಒಂದು ಸಾವಿರ ರೂ.ಮಾತ್ರ) ವಾಹನ ಭತ್ಯೆ ನೀಡುವ ಆಧಾರದ ಮೇಲೆ ಶ್ರೀಯುತ ಹೆಚ್. ಸತ್ಯನಾರಾಯಣ ಶೆಟ್ಟಿ, ನಿವೃತ್ತ ಜಿಲ್ಲಾ ಮತ್ತು ಸತ್ರ ನ್ಯಾಯಾಧೀಶರು ನಂ.49, ವಿಜಯನಗರ ಹುಬ್ಬಳ್ಳಿ-580032 ಇವರನ್ನು ವಿಚಾರಣಾ ಪ್ರಾಧಿಕಾರಿಯಾಗಿ ಹಾಗೂ ಈ ಪ್ರಕರಣದಲ್ಲಿ ಸರ್ಕಾರದ ಪರವಾಗಿ ದಾಖಲೆಗಳನ್ನು ವಿಚಾರಣಾ ಪ್ರಾಧಿಕಾರದ ಮುಂದೆ ಮಂಡಿಸಲು ಮೇಲ್ಕಂಡ ನಿಯಮಾವಳಿ ನಿಯಮ 11(5) (ಸಿ) ರನ್ವಯ ಸರ್ಕಾರಿ ಅಭಿಯೋಜಕರು ಗದಗ್ ಇವರನ್ನು ಅಭಿಯೋಕ್ತ ಅಧಿಕಾರಿಯಾಗಿ ಸರ್ಕಾರವು ಕೆಳಕಂಡ ಷರತ್ತುಗಳಿಗೆ ಒಳಪಡಿಸಿ ನೇಮಿಸಿದೆ.

**ಷರತ್ತುಗಳು:-**

1) ಪ್ರಕರಣದ ವಿಚಾರಣೆಯನ್ನು ಗದಗ್‌ನ ಸರ್ಕಾರಿ ಅಭಿಯೋಜಕರ ಕಛೇರಿಯಲ್ಲಿ ನಡೆಸತಕ್ಕದ್ದು.
2) ವಿಚಾರಣಾ ಪ್ರಾಧಿಕಾರಿಯವರಿಗೆ ಇಲಾಖಾ ವಿಚಾರಣೆ ಮುಕ್ತಾಯವಾಗುವವರೆಗೆ ಸರ್ಕಾರಿ ಅಭಿಯೋಜಕರು, ಗದಗ್ ರವರು ತಮ್ಮ ಕಛೇರಿಯ ಬೆರಳಚ್ಚುಗಾರರು:ಶೀ.ಲಿ.ಗಾರರ ಸೇವೆಯನ್ನು ಒದಗಿಸುವುದರ ಜೊತೆಗೆ ಅಗತ್ಯ ಲೇಖನ ಸಾಮಗ್ರಿಗಳನ್ನು ಸಹ ಒದಗಿಸತಕ್ಕದ್ದು.
3) ಇಲಾಖಾ ವಿಚಾರಣೆಯನ್ನು ಎರಡು ತಿಂಗಳೊಳಗೆ ಪೂರೈಸಿ ಸರ್ಕಾರಕ್ಕೆ ವಿಚಾರಣಾ ವರದಿಯನ್ನು ಸಲ್ಲಿಸತಕ್ಕದ್ದು.
4) ನಿರ್ದೇಶಕರು, ಅಭಿಯೋಗ ಮತ್ತು ಸರ್ಕಾರಿ ವ್ಯಾಜ್ಯಗಳ ಇಲಾಖೆ, ಬೆಂಗಳೂರು ರವರು ರೂ.5,000-00 ಸಂಚಿತ ಸಂಭಾವನೆಯನ್ನು ಮತ್ತು ರೂ.1000-00 ವಾಹನ ಭತ್ಯೆಯನ್ನು ವಿಚಾರಣಾ ಪ್ರಾಧಿಕಾರಿಯವರಿಗೆ ಅವರು ವಿಚಾರಣಾ ವರದಿಯನ್ನು ಸರ್ಕಾರಕ್ಕೆ ಸಲ್ಲಿಸಿದ ನಂತರ ಪಾವತಿಸತಕ್ಕದ್ದು.
5) ಈ ಸಂಬಂಧ ತಗಲುವ ವೆಚ್ಚವನ್ನು ಅಭಿಯೋಗ ಮತ್ತು ಸರ್ಕಾರಿ ವ್ಯಾಜ್ಯಗಳ ಇಲಾಖೆಯ 2003-04ನೇ ಸಾಲಿನ ಆಯವ್ಯಯದಲ್ಲಿ ಕಛೇರಿ ವೇತನ ಲೆಕ್ಕ ಶೀರ್ಷಿಕೆಯಲ್ಲಿ ಒದಗಿಸಲಾಗಿರುವ ಅನುದಾನದಲ್ಲಿ ಭರಿಸತಕ್ಕದ್ದು.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 315

**ಜಿ.ಹೆಚ್. ನಾಗೇಂದ್ರಪ್ಪ**

ಸರ್ಕಾರದ ಅಧೀನ ಕಾರ್ಯದರ್ಶಿ, ಕಾನೂನು ಇಲಾಖೆ (ಆಡಳಿತ-2).

**ವಿಷಯ:** ಶ್ರೀ ಆರ್.ಆರ್. ಭಟಕುರ್ಕಿ, ಸರ್ಕಾರಿ ಅಭಿಯೋಜಕರು, ವಿಶೇಷ ನ್ಯಾಯಾಲಯ ಬಿಜಾಪುರ ಇವರ ವಿರುದ್ಧದ ಆಪಾದನೆಗಳ ಬಗ್ಗೆ ಇಲಾಖೆ ವಿಚಾರಣೆ ನಡೆಸಲು ನೇಮಿಸಿದ್ದ ವಿಚಾರಣಾಧಿಕಾರಿಯವರನ್ನು ಬದಲಾಯಿಸುವ ಬಗ್ಗೆ - ಆದೇಶ.

**ಓದಲಾಗಿದೆ:**
1. ಸರ್ಕಾರದ ಆದೇಶ ಸಂ.ಲಾ 162 ಪಿಪಿಇ 02, ದಿನಾಂಕ:2-5-2003.
2. ನಿರ್ದೇಶಕರು, ಅಭಿಯೋಗ ಮತ್ತು ಸರ್ಕಾರಿ ವ್ಯಾಜ್ಯಗಳ ಇಲಾಖೆ, ಬೆಂಗಳೂರು ರವರ ಪತ್ರ.ಡಿಪಿಎನ್: ಟಿಎಂಕೆ:239:2000, ದಿನಾಂಕ:6-10-03.
3. ಸರ್ಕಾರದ ಆದೇಶ ಸಂ.ಲಾ 162 ಪಿಪಿಇ 02, ದಿನಾಂಕ:9-10-03.

**ಪ್ರಸ್ತಾವನೆ:**

ಶ್ರೀ ಆರ್.ಆರ್ ಭಟಕುರ್ಕಿ, ಸರ್ಕಾರಿ ಅಭಿಯೋಜಕರು, ವಿಶೇಷ ನ್ಯಾಯಾಲಯ ಬಿಜಾಪುರ ಇವರ ವಿರುದ್ಧ ಆಪಾದನೆಗಳ ಬಗ್ಗೆ ಇಲಾಖಾ ವಿಚಾರಣೆ ನಡೆಸಲು ಶ್ರೀ ವಿ.ಎನ್. ಕುಲಕರ್ಣಿ, ನಿವೃತ್ತಿ ಜಿಲ್ಲಾ ನ್ಯಾಯಾಧೀಶರು, ಬೆಂಗಳೂರು, ಇವರನ್ನು ವಿಚಾರಣಾ ಪ್ರಾಧಿಕಾರಿಯನ್ನಾಗಿ ಮೇಲೆ ಓದಲಾದ ಕ್ರಮಾಂಕ (1)ರ ಆದೇಶದಲ್ಲಿ ನೇಮಿಸಲಾಗಿತ್ತು.

ಶ್ರೀ ಎ.ಎನ್. ಕುಲಕರ್ಣಿ ನಿವೃತ್ತ ಜಿಲ್ಲಾ ನ್ಯಾಯಾಧೀಶರು, ಬೆಂಗಳೂರು ಇವರು ಈಗ ಬೆಂಗಳೂರಿನಲ್ಲಿ ವಾಸವಾಗಿರದೆ ಸ್ವಂತ ಸ್ಥಳಕ್ಕೆ ಹೋಗಿ ನೆಲೆಸಿರುವುದಾಗಿ ತಿಳಿದು ಬಂದಿದ್ದು ಅವರ ಸ್ವಂತ ಸ್ಥಳದ ವಿಳಾಸವು ಲಭ್ಯವಿರುವುದಿಲ್ಲ. ಆದ್ದರಿಂದ ಈ ಪ್ರಕರಣದ ಇಲಾಖಾ ವಿಚಾರಣೆಯನ್ನು ನಡೆಸಲು ಬೇರೆ ವಿಚಾರಣಾಧಿಕಾರಿಯವರನ್ನು ನೇಮಿಸುವಂತೆ ಮೇಲೆ ಓದಲಾದ ಕ್ರಮಾಂಕ (2)ರ ತಮ್ಮ ಪತ್ರದಲ್ಲಿ ಅಭಿಯೋಗ ನಿರ್ದೇಶಕರು ಸರ್ಕಾರವನ್ನು ಕೋರಿರುತ್ತಾರೆ.

ಪ್ರಸ್ತಾವನೆಯನ್ನು ಪರಿಶೀಲಿಸಿ ಕೆಳಕಂಡಂತೆ ಮಾರ್ಪಾಡು ಆದೇಶವನ್ನು ಹೊರಡಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ಲಾ 162 ಪಿಪಿಇ 02, ಬೆಂಗಳೂರು, ದಿನಾಂಕ: 29ನೇ ನವೆಂಬರ್ 2003**

ಸರ್ಕಾರಿ ಆದೇಶ ಸಂಖ್ಯೆ:ಲಾ 162 ಪಿಪಿಇ 02, ದಿನಾಂಕ:2-5-03 ರಲ್ಲಿ ವಿಚಾರಣಾಧಿಕಾರಿಯಾಗಿ ನೇಮಿಸಿದ್ದ ಶ್ರೀ ವಿ.ಎನ್. ಕುಲಕರ್ಣಿ, ನಿವೃತ್ತ ಜಿಲ್ಲಾ ನ್ಯಾಯಾಧೀಶರು, ಬೆಂಗಳೂರು ಇವರ ಬದಲಿಗೆ ಕ.ಸ.ಸೇ (ಸಿ.ಸಿ.ಎ) ನಿಯಮಾವಳಿ 1957ರ ನಿಯಮ 11ನೇ ನಿಯಮದ ಉಪ ನಿಯಮ (2) ರನ್ವಯ ಹಾಗೂ ಸರ್ಕಾರದ ಆದೇಶ ಸಂ.ಸಿಆಸುಇ 3 ಸೇಇವಿ 96, ದಿನಾಂಕ:24-4-98 ರನ್ವಯ ಇಲಾಖಾ ವಿಚಾರಣೆ ನಡೆಸಲು ಸದರಿ ನಿಯಮಗಳ ನಿಯಮ 11 ಮತ್ತು 11ಎ ರನ್ವಯ ಶ್ರೀ ಬಿ. ರಂಗಸ್ವಾಮಿ, ಸಂ.768, 9ನೇ ಮೇನ್, 3ನೇ ಬ್ಲಾಕ್, 3ನೇ ಹಂತ, ಬಸವೇಶ್ವರ ನಗರ, ಬೆಂಗಳೂರು-560 079 ಇವರನ್ನು ಪ್ರತಿ ಪ್ರಕರಣಕ್ಕೆ ರೂ.5,000-00 (ರೂ ಐದು ಸಾವಿರ ಮಾತ್ರ) ಸಂಚಿತ ಸಂಭಾವನೆ ಹಾಗೂ ರೂ.1,000-00 (ರೂ.ಒಂದು ಸಾವಿರ ಮಾತ್ರ) ವಾಹನ ಭತ್ಯೆ ನೀಡುವ ಆಧಾರದ ಮೇಲೆ ವಿಚಾರಣಾ ಪ್ರಾಧಿಕಾರಿಯನ್ನಾಗಿ ಈ ಕೆಳಕಂಡ ಷರತ್ತುಗಳೊಂದಿಗೆ ಸರ್ಕಾರವು ನೇಮಿಸಿದೆ.

ಪ್ರಕರಣದ ದಾಖಲೆಗಳನ್ನು ವಿಚಾರಣಾಧಿಕಾರಿಯವರ ಮುಂದೆ ಮಂಡಿಸಲು ಸರ್ಕಾರದ ಆದೇಶ ಸಂ.ಲಾ 162 ಪಿಪಿಇ 02, ದಿನಾಂಕ:9-10-03ರಲ್ಲಿ ನೇಮಿಸಿದ್ದ ಶ್ರೀ ಎಂ.ಕೆ. ರುದ್ರಪ್ಪ ಅಭಿಯೋಗ ಉಪ ನಿರ್ದೇಶಕರು, ಅಭಿಯೋಗ ಮತ್ತು ಸರ್ಕಾರಿ ವ್ಯಾಜ್ಯಗಳ ಇಲಾಖೆ, ನಿರ್ದೇಶನಾಲಯ ಬೆಂಗಳೂರು ಇವರು ಮಂಡನಾಧಿಕಾರಿಯಾಗಿ ಮುಂದುವರೆಯುತ್ತದೆ.

**ಷರತ್ತುಗಳು:**

1) ಇಲಾಖಾ ವಿಚಾರಣೆಯನ್ನು ನಿರ್ದೇಶಕರು, ಅಭಿಯೋಗ ಮತ್ತು ಸರ್ಕಾರಿ ವ್ಯಾಜ್ಯಗಳ ಇಲಾಖೆ, ಬೆಂಗಳೂರು ಇಲ್ಲಿ ನಡೆಸತಕ್ಕದ್ದು.
2) ವಿಚಾರಣಾ ಪ್ರಾಧಿಕಾರಕ್ಕೆ ವಿಚಾರಣೆ ಮುಕ್ತಾಯವಾಗುವವರೆಗೆ ಅಭಿಯೋಗ ನಿರ್ದೇಶಕರು ತಮ್ಮ ಕಛೇರಿಯಲ್ಲಿರುವ ಶೀಘ್ರಲಿಪಿಗಾರ:ಬೆರಳಚ್ಚುಗಾರರ ಸೇವೆಯನ್ನು ಒದಗಿಸುವುದಲ್ಲದೇ ಅವಶ್ಯ ಲೇಖನ ಸಾಮಗ್ರಿಗಳನ್ನು ಒದಗಿಸತಕ್ಕದ್ದು.
3) ಇಲಾಖಾ ವಿಚಾರಣೆಯನ್ನು 2 ತಿಂಗಳೊಗಾಗಿ ಮುಕ್ತಾಯಗೊಳಿಸತಕ್ಕದ್ದು.
4) ನಿರ್ದೇಶಕರು, ಅಭಿಯೋಗ ಮತ್ತು ಸರ್ಕಾರಿ ವ್ಯಾಜ್ಯಗಳ ಇಲಾಖೆ, ಬೆಂಗಳೂರು, ರವರು ಮೇಲ್ಕಂಡ ಸಂಭಾವನೆಯನ್ನು ವಿಚಾರಣಾಧಿಕಾರಿಯವರಿಗೆ ಅವರು ವಿಚಾರಣಾ ವರದಿಯನ್ನು ಸರ್ಕಾರಕ್ಕೆ ಸಲ್ಲಿಸಿದ ನಂತರವೇ ಪಾವತಿಸತಕ್ಕದ್ದು.

5) ಈ ಸಂಬಂಧ ತಗಲುವ ವೆಚ್ಚವನ್ನು ಅಭಿಯೋಗ ಮತ್ತು ಸರ್ಕಾರಿ ವ್ಯಾಜ್ಯಗಳ ಇಲಾಖೆಗೆ 2003-04ನೇ ಸಾಲಿನ ಆಯವ್ಯಯದಲ್ಲಿ ಒದಗಿಸಲಾದ ಕಚೇರಿ ವೇತನ ಲೆಕ್ಕ ಶೀರ್ಷಿಕೆಯಲ್ಲಿ ಭರಿಸತಕ್ಕದ್ದು.

6) ಒಂದು ವೇಳೆ ಶ್ರೀ ಎಂ.ಕೆ. ರುದ್ರಪ್ಪ, ಅಭಿಯೋಗ ಉಪ ನಿರ್ದೇಶಕರು, ರವರು ವರ್ಗಾವಣೆಯಾದ ಪಕ್ಷದಲ್ಲಿ ಅವರ ಸ್ಥಾನದಲ್ಲಿ ನೇಮಕವಾದ ಅಧಿಕಾರಿಯವರೇ ಮಂಡನಾಧಿಕಾರಿಯಾಗಿ ಮುಂದುವರೆಯತಕ್ಕದ್ದು.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 316 **ಜಿ.ಹೆಚ್. ನಾಗೇಂದ್ರಪ್ಪ**

ಸರ್ಕಾರದ ಅಧೀನ ಕಾರ್ಯದರ್ಶಿ, ಕಾನೂನು ಇಲಾಖೆ (ಆಡಳಿತ-2).

**ವಿಷಯ:** ಶ್ರೀ ಬಿ.ಸಿ. ಶಿವರುದ್ರಸ್ವಾಮಿ ಹಿರಿಯ ಸಹಾಯಕ ಸರ್ಕಾರಿ ಅಭಿಯೋಜಕರು ಇವರ ನಿಯೋಜನಾ ಅವಧಿಯನ್ನು ವಿಸ್ತರಿಸುವ ಬಗ್ಗೆ.

**ಓದಲಾಗಿದೆ:**
1. ಸರ್ಕಾರದ ಆದೇಶ ಸಂ.ಲಾ 114 ಪಿಪಿಇ 97, ದಿನಾಂಕ:12-6-98.
2. ಸರ್ಕಾರದ ಆದೇಶ ಸಂ.223 ಪಿಪಿಇ 98, ದಿನಾಂಕ:2-11-98 ಮತ್ತು 19-1-99.
3. ನಿರ್ದೇಶಕರು, ಅಭಿಯೋಗ ಮತ್ತು ಸರ್ಕಾರಿ ವ್ಯಾಜ್ಯಗಳ ಇಲಾಖೆ, ಬೆಂಗಳೂರು ರವರ ಪತ್ರ.ಸಂ.ಡಿಪಿಎನ್: ಸಿಶಾ-1:51:03-04, ದಿನಾಂಕ:28-5-03.

**ಪ್ರಸ್ತಾವನೆ:**

ಮೇಲೆ ಓದಲಾದ ಕ್ರಮಾಂಕ (1) ರ ಸರ್ಕಾರದ ಅಧಿಸೂಚನೆಯಲ್ಲಿ ಶ್ರೀ ಬಿ.ಸಿ. ಶಿವರುದ್ರಸ್ವಾಮಿ, ಅಂದಿನ ಸಹಾಯಕ ಸರ್ಕಾರಿ ಅಭಿಯೋಜಕರು, ಸಿ.ಜೆ (ಕಿ.ವಿ) ಮತ್ತು ಜೆಎಂಎಫ್‌ಸಿ ನ್ಯಾಯಾಲಯ ಕೆ.ಆರ್. ನಗರ ಇವರನ್ನು ಬೆಂಗಳೂರು ನಗರ ವಿದ್ಯುಚ್ಛಕ್ತಿ ಮಂಡಳಿಯಲ್ಲಿ ಸಹಾಯಕ ಕಾನೂನು ಅಧಿಕಾರಿಯಾಗಿ ನಿಯೋಜನೆ ಮೇಲೆ ನೇಮಿಸಲು ಅವರ ಸೇವೆಯನ್ನು ಇಂಧನ ಇಲಾಖೆಯ ವಶಕ್ಕೆ ನೀಡಿದ್ದು ಮೇಲೆ ಓದಲಾದ (2)ರ ಸರ್ಕಾರದ ಆದೇಶದ ಪ್ರಕಾರ ನಿಯೋಜನಾ ಅವಧಿಯು ದಿನಾಂಕ:5-7-03ಕ್ಕೆ 5 ವರ್ಷ ಮುಕ್ತಾಯವಾಗಿದೆ.

ಹೃದಯ ಶಸ್ತ್ರ ಚಿಕಿತ್ಸೆಯಾಗಿರುವ ಕಾರಣ ಬೆಂಗಳೂರಿನಲ್ಲಿ ವೈದ್ಯಕೀಯ ಚಿಕಿತ್ಸೆ ಪಡೆಯಬೇಕಾಗಿರುವುದರಿಂದ ಕೆ.ವಿ.ಪ್ರ.ನಿ.ನಿ.ದಲ್ಲಿ ಇನ್ನೂ 1 ವರ್ಷ ನಿಯೋಜನಾ ಅವಧಿಯನ್ನು ವಿಸ್ತರಿಸುವಂತೆ ಕೋರಿ ಶ್ರೀ ಬಿ.ಸಿ. ಶಿವರುದ್ರಸ್ವಾಮಿ ಸಲ್ಲಿಸಿರುವ ಮನವಿಯ ಮೇಲೆ ಮುಖ್ಯ ಕಾನೂನು ಸಲಹೆಗಾರರು ಕ.ವಿ.ಪ್ರ.ನಿ.(ನಿ) ಬೆಂಗಳೂರು ರವರು ಸದರಿ ಅಧಿಕಾರಿಯವರ ಕೋರಿಕೆಯನ್ನು ವೈದ್ಯಕೀಯ ಕಾರಣಗಳ ಮೇಲೆ ಪರಿಗಣಿಸಲು ಶಿಫಾರಸ್ಸು ಮಾಡಿರುವುದರಿಂದ ಸದರಿ ಅಧಿಕಾರಿಯವರನ್ನು ನಿಯೋಜನೆ ಮೇಲೆ ದಿನಾಂಕ:6-7-03 ರಿಂದ 5-7-04 ರವರೆಗೆ 1 ವರ್ಷ ಮುಂದುವರೆಸಬಹುದಾಗಿದೆ ಎಂದು ಮೇಲೆ ಓದಲಾದ ಕ್ರಮಾಂಕ (3) ರಲ್ಲಿ ಅಭಿಯೋಗ ನಿರ್ದೇಶಕರು, ಸರ್ಕಾರಕ್ಕೆ ಶಿಫಾರಸ್ಸು ಮಾಡಿರುತ್ತಾರೆ. ಪ್ರಸ್ತಾವನೆಯನ್ನು ಪರಿಶೀಲಿಸಿ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ ಲಾ 162 ಪಿಪಿಇ 2003, ಬೆಂಗಳೂರು, ದಿನಾಂಕ: 22ನೇ ಅಕ್ಟೋಬರ್ 2003**

ಶ್ರೀ ಬಿ.ಸಿ. ಶಿವರುದ್ರಸ್ವಾಮಿ, ಹಿರಿಯ ಸಹಾಯಕ ಸರ್ಕಾರಿ ಅಭಿಯೋಜಕರು ಹಾಲಿ ಸಹಾಯಕ ಕಾನೂನು ಅಧಿಕಾರಿ ಕ.ವಿ.ಪ್ರ.ನಿ.(ನಿ), ಬೆಂಗಳೂರು ಇವರ ನಿಯೋಜನಾ ಅವಧಿಯನ್ನು ದಿನಾಂಕ:6-7-03 ರಿಂದ 31-3-04 ರವರೆಗೆ ಕರ್ನಾಟಕ ನಾಗರೀಕ ಸೇವಾ ನಿಯಮಾವಳಿಯ ನಿಯಮ 419 (ಬಿ) ಅನ್ವಯ ವಿಶೇಷ ಆದೇಶದ ಮುಖಾಂತರ ಸರ್ಕಾರಿ ಆದೇಶ ಸಂಖ್ಯೆ: ಲಾ 223 ಪಿಪಿಇ 98, ದಿನಾಂಕ: 23-11-98 ರಲ್ಲಿ ನಿಬಂಧನೆ ಮತ್ತು ಷರತ್ತುಗಳೊಂದಿಗೆ ವಿಸ್ತರಿಸಿದೆ.

ಮೇಲ್ಕಂಡ ಅವಧಿ ಮುಕ್ತಾಯಗೊಂಡ ತಕ್ಷಣ ಅವರನ್ನು ಕರ್ತವ್ಯದಿಂದ ಬಿಡುಗಡೆ ಮಾಡಿ ಮಾತೃ ಇಲಾಖೆಗೆ ಹಿಂತಿರುಗಿಸತಕ್ಕದ್ದು.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 317 **ಜಿ.ಹೆಚ್. ನಾಗೇಂದ್ರಪ್ಪ**

ಸರ್ಕಾರದ ಅಧೀನ ಕಾರ್ಯದರ್ಶಿ, ಕಾನೂನು ಇಲಾಖೆ (ಆಡಳಿತ-2).

**ವಿಷಯ:** ಶ್ರೀ ಸಿ. ಕಾಳಿಂಗರಾವ್, ಸರ್ಕಾರಿ ಅಭಿಯೋಜಕರು, ರಾಯಚೂರು, ಇವರ ವಿರುದ್ಧದ ಆಪಾದನೆಗಳ ಬಗ್ಗೆ ಇಲಾಖಾ ವಿಚಾರಣೆ ನಡೆಸಲು ವಿಚಾರಣಾಧಿಕಾರಿ ಮತ್ತು ಮಂಡನಾಧಿಕಾರಿಯನ್ನು ನೇಮಿಸುವ ಬಗ್ಗೆ - ಆದೇಶ.

**ಓದಲಾಗಿದೆ:**
1. ನಿರ್ದೇಶಕರು, ಅಭಿಯೋಗ ಮತ್ತು ಸರ್ಕಾರಿ ವ್ಯಾಜ್ಯಗಳ ಇಲಾಖೆ, ಬೆಂಗಳೂರು ರವರ ಪತ್ರ.ಸಂಖ್ಯೆ ಡಿಪಿಎನ್: ಆರ್‌ಸಿಆರ್:493:2001, ದಿನಾಂಕ:6-11-01.
2. ಸರ್ಕಾರದ ಕಾರಣ ಕೇಳುವ ತಿಳುವಳಿಕೆ ಪತ್ರ ಸಂಖ್ಯೆ:ಲಾ 404 ಪಿಪಿಇ 01, ದಿನಾಂಕ:5-8-03.
3. ಶ್ರೀ ಸಿ. ಕಾಳಿಂಗರಾವ್, ಸರ್ಕಾರಿ ಅಭಿಯೋಜಕರು, ರಾಯಚೂರು ಇವರ ಲಿಖಿತ ಹೇಳಿಕೆ ಸಂ.ಆರ್‌ಸಿಆರ್: ಪಿಪಿ:ಎಸ್‌ಎಸಿ:4:98-99, ದಿನಾಂಕ:15-9-03.
4. ಸರ್ಕಾರದ ಆದೇಶ ಸಂ.ಸಿಆಸುಇ 3 ಸೇಇವಿ 96, ದಿನಾಂಕ:24-4-1996.

ಶ್ರೀ ಸಿ. ಕಾಳಿಂಗರಾವ್, ಸರ್ಕಾರಿ ಅಭಿಯೋಜಕರು, ರಾಯಚೂರು ರವರು ರಾಯಚೂರು ಪ್ರಧಾನ ಸತ್ರ ನ್ಯಾಯಾಲಯದ ಸ್ಪೆಷಲ್ ಕೇಸ್ ಸಂ.4:98ನ್ನು ನಡೆಸುವಾಗ ಒಟ್ಟು 11 ಜನ ಸಾಕ್ಷಿಗಳನ್ನು ವಿಚಾರಣೆ ಮಾಡಿ 11 ದಾಖಲೆಗಳನ್ನು ಮತ್ತು 13 ವಸ್ತುಗಳನ್ನು ಹಾಜರುಪಡಿಸಿ ಗುರುತಿಸಿರುತ್ತಾರೆ. ಪ್ರಾ.ಸಂ-2 ರವರು ಪ್ರದರ್ಶಿತ ಪಂಚನಾಮ ಹಾಗೂ ಲಂಚದ ಹಣವನ್ನು ಅಮಾನತ್ತು ಮಹಜರನ ಸಾಕ್ಷಿಯಾಗಿದ್ದು, ಸದರಿಯವರು ಅಭಿಯೋಜನೆ ಪಕ್ಷದ ಕೇಸಿನ ಪ್ರಕಾರ ಪೂರಕ ಸಾಕ್ಷ್ಯ ನುಡಿಯದಿದ್ದರೂ ಸದರಿ ಸಾಕ್ಷಿಯನ್ನು ಪ್ರತಿಕೂಲ

ಸಾಕ್ಷಿಯನ್ನಾಗಿ ಪರಿಗಣಿಸಿ ಪಾಟೀ ಸವಾಲು ಮಾಡಿರುವುದಿಲ್ಲ. ಅದೇ ರೀತಿ ಪ್ರಾ ಸಂ-6 ರವರು ಸಹ ಅಭಿಯೋಜನದಾರರು ಲಂಚದ ಹಣವನ್ನು ಹಾಜರುಪಡಿಸಿದ ನೋಟಿನ ಮುಖ ಬೆಲೆಯ ಬಗ್ಗೆ ವಿರುದ್ಧ ಸಾಕ್ಷ್ಯ ನುಡಿದಿದ್ದರೂ ಸಹ ಪ್ರತಿಕೂಲ ಸಾಕ್ಷಿಯನ್ನಾಗಿ ಪರಿಗಣಿಸಿ ವಿಚಾರಣೆ ಮಾಡಿರುವುದಿಲ್ಲ. ಮೊಕದ್ದಮೆಯ ಪ್ರತ್ಯಕ್ಷಿ ಸಾಕ್ಷಿ ಮಹಮದ್ ಸಾಬಿದ್ ಮಹಮದ್ ಇವರನ್ನು ನ್ಯಾಯಾಲಯದಲ್ಲಿ ಸಾಕ್ಷಿಯನ್ನಾಗಿ ವಿಚಾರಣೆ ಮಾಡಿರುವುದಿಲ್ಲ. ಅಭಿಯೋಜನೆ ಪಕ್ಷದ ಕೇಸಿನ ಪ್ರಕಾರ ಲಂಚದ ಹಣವನ್ನು 2ನೇ ಆರೋಪಿ ವಶದಿಂದ ಅಮಾನತ್ತುಪಡಿಸಿಕೊಳ್ಳಲಾಯಿತೆಂದು ಕಂಡು ಬಂದಿದ್ದರೂ ಪ್ರಾ.ಸಂ. 2 ರವರು ಅವರ ಸಾಕ್ಷ್ಯದಲ್ಲಿ ಲಂಚದ ಹಣವನ್ನು 1ನೇ ಆರೋಪಿಯ ವಶದಿಂದ ಅಮಾನತ್ತು ಪಡಿಸಿಕೊಳ್ಳಲಾಯಿತೆಂದು ಸಾಕ್ಷಿ ನುಡಿದಿರುತ್ತಾರೆ. ಮೇಲ್ಕಂಡಂತೆ ಕೇಸನ್ನು ನಡೆಸುವಾಗ ಯಾಂತ್ರಿಕವಾಗಿ ನಡೆಸಿದ್ದು ಮೇಲೆ ವಿವರಿಸಿದ ರೀತ್ಯ ಕರ್ತವ್ಯ ಲೋಪ ಎಸಗಿರುವುದರಿಂದ, ಈ ಬಗ್ಗೆ ಅವರ ವಿವರಣೆಯನ್ನು ಪಡೆಯಲಾಗಿದ್ದು, ಅವರು ಸಲ್ಲಿಸಿರುವ ವಿವರಣೆ ಸಮಂಜಸವಾಗಿಲ್ಲದಿರುವುದರಿಂದ ಸದರಿ ಅಧಿಕಾರಿಯವರ ವಿರುದ್ಧ ಕ್ರಮ ಜರುಗಿಸಬೇಕೆಂದು ಮೇಲೆ ಓದಲಾದ ಕ್ರಮಾಂಕ 1ರ ಪತ್ರದಲ್ಲಿ ನಿರ್ದೇಶಕರು, ಅಭಿಯೋಗ ಮತ್ತು ಸರ್ಕಾರಿ ವ್ಯಾಜ್ಯಗಳ ಇಲಾಖೆ, ಬೆಂಗಳೂರು, ರವರು ಸರ್ಕಾರವನ್ನು ಕೋರಿರುತ್ತಾರೆ.

ಮೇಲೆ ಓದಲಾದ ಕ್ರಮಾಂಕ (2)ರ ಸರ್ಕಾರದ ಕಾ.ಕೇ.ತಿ. ಪತ್ರದೊಂದಿಗೆ ಅನುಬಂಧ-1ರಿಂದ 4 ರವರೆಗಿನ ದೋಷಾರೋಪಣಾ ಪಟ್ಟಿಯನ್ನು ಶ್ರೀ ಸಿ. ಕಾಳಿಂಗರಾವ್ ಸರ್ಕಾರಿ ಅಭಿಯೋಜಕರು ರಾಯಚೂರು ಇವರಿಗೆ ಜಾರಿಗೊಳಿಸಿ ತಮ್ಮ ಮೇಲಿನ ಆರೋಪಗಳನ್ನು ಸ್ಪಷ್ಟವಾಗಿ ಒಪ್ಪಿಕೊಳ್ಳುವ ಅಥವಾ ನಿರಾಕರಿಸುವ ಬಗ್ಗೆ ಲಿಖಿತ ಹೇಳಿಕೆಯನ್ನು ಸಲ್ಲಿಸುವಂತೆ ತಿಳಿಯಪಡಿಸಲಾಗಿತ್ತು.

ಮೇಲೆ ಓದಲಾದ ಕ್ರಮಾಂಕ (3)ರಲ್ಲಿ ಶ್ರೀ ಪಿ. ಕಾಳಿಂಗರಾವ್, ಸರ್ಕಾರಿ ಅಭಿಯೋಜಕರು ರಾಯಚೂರು ರವರು ಸರ್ಕಾರಕ್ಕೆ ತಮ್ಮ ಲಿಖಿತ ಹೇಳಿಕೆಯನ್ನು ಸಲ್ಲಿಸಿರುತ್ತಾರಾದರೂ ಆರೋಪಗಳನ್ನು ಒಪ್ಪಿಕೊಂಡಿರುವುದಿಲ್ಲ. ಆದ್ದರಿಂದ ಸದರಿಯವರ ಮೇಲಿನ ಆರೋಪಗಳ ಬಗ್ಗೆ ಸತ್ಯಾಂಶಗಳನ್ನು ಕಂಡುಕೊಳ್ಳುವ ಹಿತದೃಷ್ಟಿಯಿಂದ ಇಲಾಖಾ ವಿಚಾರಣೆ ನಡೆಸುವುದು ಸೂಕ್ತ ಎಂದು ಸರ್ಕಾರವು ನಿರ್ಧರಿಸಿ ಕೆಳಕಂಡಂತೆ ಆದೇಶ ಹೊರಡಿಸಿದೆ.

**ಸರ್ಕಾರದ ಆದೇಶ ಸಂ.ಲಾ 404 ಪಿಪಿಇ 2001, ಬೆಂಗಳೂರು, ದಿನಾಂಕ: 1ನೇ ಡಿಸೆಂಬರ್ 2003**

ಶ್ರೀ ಸಿ. ಕಾಳಿಂಗರಾವ್, ಸರ್ಕಾರಿ ಅಭಿಯೋಜಕರು, ರಾಯಚೂರು ಇವರ ವಿರುದ್ಧದ ಆಪಾದನೆಗಳ ಬಗ್ಗೆ 1957ರ ಕೆ.ಸಿ.ಎಸ್(ಸಿಸಿಎ) ನಿಯಮಾವಳಿಯ 11ನೇ ನಿಯಮದ ಉಪನಿಯಮ (2) ರನ್ವಯ ಹಾಗೂ ಸರ್ಕಾರದ ಆದೇಶ ಸಂ.ಸಿಆಸುಇ 3 ಸೇಇವಿ 96, ದಿನಾಂಕ: 24-4-96ರನ್ವಯ ಇಲಾಖಾ ವಿಚಾರಣೆ ನಡೆಸಲು ಮೇಲ್ಕಂಡ ನಿಯಮಾವಳಿ ನಿಯಮ 11 ಮತ್ತು 11 'ಎ' ರನ್ವಯ ಶ್ರೀ ಟಿ.ಬಿ. ಮರಿಯಪ್ಪ, ನಿವೃತ್ತಿ ಜಿಲ್ಲಾ ನ್ಯಾಯಾಧೀಶರು, ನಂ.648, 2ನೇ ಕ್ರಾಸ್, 8ನೇ ಮುಖ್ಯರಸ್ತೆ, 3ನೇ ಬ್ಲಾಕ್, 3ನೇ ಹಂತ, ಬಸವೇಶ್ವರ ನಗರ, ಬೆಂಗಳೂರು-79 ಇವರನ್ನು ಪ್ರತಿ ಪ್ರಕರಣಕ್ಕೆ ರೂ.5,000-00 (ರೂ.ಐದು ಸಾವಿರ ಮಾತ್ರ) ಸಂಚಿತ ಸಂಭಾವನೆ ಹಾಗೂ ಪ್ರತಿ ಪ್ರಕರಣಕ್ಕೆ ರೂ.1,000-00 (ರೂ.ಒಂದು ಸಾವಿರ ಮಾತ್ರ) ವಾಹನ ಭತ್ಯೆ ನೀಡುವ ಆಧಾರದ ಮೇಲೆ ವಿಚಾರಣಾ ಪ್ರಾಧಿಕಾರಿಯನ್ನಾಗಿ ಹಾಗೂ ಸದರಿ ಪ್ರಕರಣದಲ್ಲಿ ಸರ್ಕಾರದ ಪರವಾಗಿ ದಾಖಲೆಗಳನ್ನು ವಿಚಾರಣಾ ಪ್ರಾಧಿಕಾರದ ಮುಂದೆ ಮಂಡಿಸಲು ಶ್ರೀ ಎನ್.ಆರ್. ರಾಮಕೃಷ್ಣ ಸರ್ಕಾರಿ ಅಭಿಯೋಜಕರು ಪ್ರಧಾನ ಸಿಟಿ ಸಿವಿಲ್ ಮತ್ತು ಸತ್ರ ನ್ಯಾಯಾಧೀಶರ ನ್ಯಾಯಾಲಯ, ಬೆಂಗಳೂರು ಇವರನ್ನು ಮಂಡನಾಧಿಕಾರಿಯನ್ನಾಗಿ ಈ ಕೆಳಕಂಡ ಷರತ್ತುಗಳೊಂದಿಗೆ ಸರ್ಕಾರವು ನೇಮಿಸಿದೆ.

1) ಇಲಾಖಾ ವಿಚಾರಣೆಯನ್ನು ಅಭಿಯೋಗ ಮತ್ತು ಸರ್ಕಾರಿ ವ್ಯಾಜ್ಯಗಳ ಇಲಾಖೆ, ನಿರ್ದೇಶಕರ ಕಛೇರಿಯಲ್ಲಿ ನಡೆಸತಕ್ಕದ್ದು.
2) ವಿಚಾರಣಾ ಪ್ರಾಧಿಕಾರಕ್ಕೆ ವಿಚಾರಣೆ ಮುಕ್ತಾಯವಾಗುವವರೆಗೆ ಅಭಿಯೋಗ ನಿರ್ದೇಶಕರು ತಮ್ಮ ಕಛೇರಿಯಲ್ಲಿ ಲಭ್ಯವಿರುವ ಶೀಘ್ರಲಿಪಿಗಾರರು : ಬೆರಳಚ್ಚುಗಾರರ ಸೇವೆಯನ್ನು ಒದಗಿಸುವುದಲ್ಲದೆ ಅವಶ್ಯ ಲೇಖನ ಸಾಮಗ್ರಿಗಳನ್ನು ಒದಗಿಸತಕ್ಕದ್ದು.
3) ಇಲಾಖಾ ವಿಚಾರಣೆಯನ್ನು ಎರಡು ತಿಂಗಳೊಳಗಾಗಿ ಮುಕ್ತಾಯ ಮಾಡಿ ವಿಚಾರಣಾ ವರದಿಯನ್ನು ಸರ್ಕಾರಕ್ಕೆ ಸಲ್ಲಿಸತಕ್ಕದ್ದು.
4) ನಿರ್ದೇಶಕರು, ಅಭಿಯೋಗ ಮತ್ತು ಸರ್ಕಾರಿ ವ್ಯಾಜ್ಯಗಳ ಇಲಾಖೆ, ಬೆಂಗಳೂರು ಇವರು ರೂ.5,000-00 ಹಾಗೂ ರೂ.1,000-00 ಕ್ರಮವಾಗಿ ಸಂಚಿತ ಸಂಭಾವನೆ ಹಾಗೂ ವಾಹನ ಭತ್ಯೆಯನ್ನು ವಿಚಾರಣಾ ಪ್ರಾಧಿಕಾರಕ್ಕೆ ಅವರು ವಿಚಾರಣಾ ವರದಿಯನ್ನು ಸರ್ಕಾರಕ್ಕೆ ಸಲ್ಲಿಸಿದ ನಂತರ ಪಾವತಿಸತಕ್ಕದ್ದು.
5) ಈ ಸಂಬಂಧ ತಗಲುವ ವೆಚ್ಚವನ್ನು ಅಭಿಯೋಗ ಮತ್ತು ಸರ್ಕಾರಿ ವ್ಯಾಜ್ಯಗಳ ಇಲಾಖೆಯ 2003-04ನೇ ಸಾಲಿನ ಆಯವ್ಯಯದಲ್ಲಿ ಒದಗಿಸಲಾದ ಕಛೇರಿ ವೇತನ ಲೆಕ್ಕ ಶೀರ್ಷಿಕೆಯಲ್ಲಿ ಭರಿಸತಕ್ಕದ್ದು.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 318

**ಜಿ.ಹೆಚ್. ನಾಗೇಂದ್ರಪ್ಪ**

ಸರ್ಕಾರದ ಅಧೀನ ಕಾರ್ಯದರ್ಶಿ, ಕಾನೂನು ಇಲಾಖೆ (ಆಡಳಿತ-2).

## WOMEN AND CHILD DEVELOPMENT SECRETARIAT

**Sub:** Appointment of Sri L. Krishnamurthy, as Commissioner for Persons with Disabilities - Regarding issue of Terms and Conditions.

**Read:** 1. Notification No:WCD/434/PHP/98, Dated.16-11-1999.
2. Notification No:WCD/527/PHP/2001, Dated.17-02-04.

**PREAMBLE:**

In supersession of the Notification No/WCD/434/PHP/98 dated 16-11-1999 Sri L.Krishnamurthy, has been appointed as Commissioner for Persons with Disabilities under section 60[1] of the Persons with

Disabilities [Equal Opportunities, Protection of Rights and Full Participation] Act, 1995. As per the provision under section 60[3], prescribing terms and conditions has been examined and the following order is issued.

**Order No. WCD/527/PHP/2001, Bangalore, Dated: 4th March 2004**

Government is pleased to issue the following Terms and Conditions to Sri Krishnamurthy, the State Commissioner for Disabilities, under section 60[3] of the Persons with Disabilities [Equal Opportunities, Protection of Rights and Full Participation] Act, 1995.

[1] The term of the State Commissioner shall be three years from the date of entry into the office, or until further orders, whichever is earlier.

[2] The State Commissioner will receive the Remuneration, House Rent Allowance Conveyance, Travelling Allowances and other perquisites as per G.O.NO.D.P.A.R.[BPE]62,SPU. 98. dated. 18-06-98,

[3] He can exercise general administrative powers and those financial powers delegated to him from time to time by the State Government

[4] The officers and employees provided to the Commissioner shall discharge their functions under the general Superintendance of the commissioner.

[5] The Commissioner may resign at any time by writing under his hand addressed to the State Government and the seat of the Commissioner shall thereupon become vacant.

[6] The Commissioner cannot hold any other post simultaneously.

[7] The Commissioner once removed from the office cannot be reappointed.

By Order and in the name of the Governor of Karnataka,

P.R. 320

**R.M. CHANDRAMMA**

Under Secretary to Government-1, Women and Child Development Department.

**FOREST, ECOLOGY AND ENVIRONMENT SECRETARIAT**

**Sub:** Renewal of mining lease No.2247 in favour of M/S H.R.Gaviappa and Company Bellary for Iron Ore mine over an area of 34.00 ha. in Navalatti Village, Sandur Taluk, Bellary District.

**Read:**
1. Letter No.A5(B1)MNG.CR.17/2000-2001, dt:14/11/2000 of the Principal Chief Conservator of Forests, Bangalore.
2. State Government letter of even number dt: 15.05.2001.
3. Government of India, Ministry of Environment and Forests, New Delhi, letter No. 8-57/2001-FC, dated: 04.07.2001.
4. Government of India, Ministry of Environment and Forests, New Delhi, letter No. 2-1/99-FC, dated: 05.02.2003.
5. Government of India, Ministry of Environment and Forests, New Delhi, letter No. 8-57/2001-FC, dated:25.07.2003, 14.08.2003 and 12/13-02-2004.

**PREAMBLE:**

The Principal Chief Conservator of Forests, Bangalore had sent proposal vide his letter dated 14.11.2000 read at (1) above for renewal of mining lease No.2247 in favour of M/s H.R.Gaviappa and Company, Bellary for iron ore mine over an area of 32.00 ha. and 2.00 ha. for approach road in Navalatti Village, Sandur Taluk, Bellary District under Forest (Conservation) Act,1980 for a period of ten years subject to certain conditions.

The proposal of Principal Chief Conservator of Forests was recommended to Government of India, Ministry of Environment and Forests, New Delhi vide letter of even number dated: 15.05.2001 read at (2) above and its approval was sought under Section-2 of Forest(Conservation) Act,1980 for the renewal of mining lease No.2247 in favour of M/s H.R.Gaviappa and Company,Bellary District

Government of India, Ministry of Environment and Forests, New Delhi vide their letter dated 04-07-2001 read at (3) above has informed State Government that this proposal shall be considered for decision only after receipt of the recommendations of the joint team appointed by the Ministry of Mines for suggesting policy guidelines for renewal or grant of new mining leases in the Bellary-Hospet region. Till the time the State Government has been requested not to forward any new or renewal mining proposals pertaining to this area.

Thereafter, Government of India, Ministry of Environment and Forests, New Delhi vide their letter dated 05.02.2003 read at (4) above after considering all the facts of the proposal have accorded

temporary working permission for six months with effect from 05.02.2003 subject to the conditions that no new area shall be broken up and all environmental safeguards shall be adhered to.

Further, Government of India, Ministry of Environment and Forests, New Delhi vide their letter dated 25.07.2003 read at (5) above after careful consideration of the proposal of the State Government and on the basis of the recommendation of the Advisory Committee had agreed in-principle for renewal of mining lease No.2247 over 34.00 ha. of forest land in favour of M/s H.R.Gaviappa and Company in district Bellary subject to fulfillment of certain conditions.

Government of India, Ministry of Environment and Forests, New Delhi in its subsequent letter dated 14.08.2003 read at (5) above and in continuation of its earlier letter dated 25.7.2003 has conveyed the approval for extension of temporary working permission over already broken up area of 32.00 ha. only for a period of 6(six) months w.e.f. 5.8.2003 for continuing the mining in respect of renewal of mining lease No.2247 over 34.00 ha. of forest land in favour of M/s H.R.Gaviappa and Co., in Bellary District.

Finally, Government of India, Ministry of Environment and Forests, New Delhi vide their letter dated 12/13.02.2004 read at (5) above after careful consideration of the proposal of the State Government and on the basis of the recommendation of the Advisory Committee, has conveyed its approval under Section 2 of Under Forest (Conservation) Act,1980 for renewal of mining lease No.2247 over 34.00 ha. of forest land in favour of M/s H.R.Gaviappa and Co., in Bellary District subject to fulfillment of certain conditions. Hence, this order.

**Government Order No. FEE 96 FFM 2000, Bangalore, Dated: 8th March 2004**

After examining all aspects of the matter and in view of the approval accorded to the proposal by the Government of India, Ministry of Environment and Forests, New Delhi, Government are pleased to accord its approval under Section 2 of Forest (Conservation) Act,1980 for renewal of ML No.2247 over 34 ha. of forest land in favour of M/s H.R.Gaviappa and Company in Bellary District subject to fulfillment of following conditions:

1. Legal status of the forest land shall remain unchanged.
2. Compensatory Afforestation shall be raised and maintained over 2 ha. of non-forest land at the project cost.
3. The non-forest land for compensatory afforestation shall be notified by the State Government as RF under section 4 of PF under section 29 of the Indian Forest Act,1927 or the State Forest Act within a period of 6 months and Nodal officer(Forest Conservation) shall report the compliance.
4. The User Agency shall create and maintain a Safety Zone over equivalent degraded forest land and will also create and maintain the plantation over an area one and half times in extent of the safety zone at the project cost.
5. State Government shall collect the Net Present Value(NPV) of the forest land as per the orders of the Supreme Court. The land shall not be transferred to the User Agency till the NPV is collected by the State Government.
6. RCC pillars of 4 feet height shall be erected by the User Agency to demarcate the area at the project cost and the pillars will be marked with forward and back bearing.
7. The user agency will reclaim the area concurrent to mining at the project cost. The user agency will actively take up the work of stabilization of inactive dumps and the back-filling.
8. Trees shall not be felled.
9. No new construction activity shall be allowed on a forest land.
10. No labour camps shall be established on the forest land.
11. Sufficient firewood shall be provided by the User Agency to the labourers at the project cost after purchase from the State Forest Department/Forest Development Corporation.
12. The User Agency shall ensure that there should be no damage to the available wildlife.
13. The approval under the Under Forest (Conservation) Act,1980 is subject to clearance under the Environment(Protection)Act,1986, if applicable.
14. The lease period of 20 years shall be co-terminus with the current lease granted under MMRD Act,1957.
15. The forest land shall not be used for any purpose other than that specified in the proposal.
16. Any other condition that the State Government as well as Chief Conservator of Forests(Central), Regional Office, Bangalore/Principal Chief Conservator of Forests, Bangalore may impose from time to time for the protection ;and improvement of flora and fauna in the forest area.

17. The lessee shall pay usual lease rent and supervision charges as prescribed by the Government from time to time.
18. The lessee shall deposit the amount at prevailing rate towards raising of compensatory afforestation over 2.00 ha. in non-forest land.
19. The lessee shall undertake the afforestation measures in vacant area of the leased area.
20. The lessee shall carry out soil and water conservation measures and other necessary measures as advised by the Forest Department.
21. The lessee shall undertake to protect rigidly the leased area and forest area surrounding the area up to one Km. from the leased area.
22. The lessee shall not cut any trees without prior permission of the Forest Department and all produce of permitted fellings shall be handed over to Forest Department under cover of receipt.
23. The lessee shall abide by all the conditions prescribed by Government of India and Government of Karnataka.
24 The lessee shall execute an agreement with the Forest Department binding himself to abide by all usual conditions and terms as per orders of the Government as well as Principal Chief Conservator of Forests.
25. The lessee shall take-up the planting work on the static dumps during the advance mining operations.
26. In case of violation of agreement conditions Forest Department shall have right to suspend the mining activities.

By Order and in the name of the Governor of Karnataka,

P.R. 321

**S.R. VATSALA**

Under Secretary to Government, Forest, Ecology and Environment Department.

## ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಸಚಿವಾಲಯ

## ಸೇರ್ಪಡೆ

### ಸಂ. ಸಿಆಸುಇ 12 ಹೆಚ್‌ಹೆಚ್‌ಎಲ್, 2003, ಬೆಂಗಳೂರು, ದಿನಾಂಕ: 1ನೇ ಮಾರ್ಚ್ 2004

ಭಾರತ ಸರ್ಕಾರದ ಒಳಾಡಳಿತ ವ್ಯವಹಾರಗಳ ಇಲಾಖೆಯ ಕ್ರಮಾಂಕ 20:25:26 ಪಿಯುಬಿ.1 ದಿನಾಂಕ 15.6.1957ರ ಅಧಿಸೂಚನೆಯಲ್ಲಿ ಪ್ರಸ್ತಾಪಿಸಲಾಗಿರುವ ನೆಗೋಷಿಯಬಲ್ ಇನ್ಸ್‌ಟ್ರುಮೆಂಟ್ಸ್ ಆ್ಯಕ್ಟ್ 1881ರ (1881ರ ಅಧಿನಿಯಮ ಸಂ. 26) 25ನೇ ಸೆಕ್ಷನ್‌ನಲ್ಲಿರುವ ವಿವರಣೆಯಂತೆ "ಗುಡ್ ಫ್ರೈಡೇ" ಪ್ರಯುಕ್ತ ದಿನಾಂಕ 9.4.2004ರ ಶುಕ್ರವಾರದಂದು ಹೆಚ್ಚುವರಿಯಾಗಿ ಕರ್ನಾಟಕ ರಾಜ್ಯದಾದ್ಯಂತ ಸಾರ್ವಜನಿಕ ರಜೆಯನ್ನು ಸರ್ಕಾರವು ಘೋಷಿಸಿದೆ. ಈ ರಜೆಯನ್ನು ಸರ್ಕಾರದ ಅಧಿಸೂಚನೆ-2 ಸಂಖ್ಯೆ ಸಿಆಸುಇ 12 ಹೆಚ್‌ಹೆಚ್‌ಎಲ್ 2003 ದಿನಾಂಕ 27.11.2003 ರಲ್ಲಿಯ ಕ್ರಮ ಸಂ.6ರ ಕೆಳಗೆ 6-ಎ ಎಂದು ಸೇರ್ಪಡಿಸಿ ಓದಿಕೊಳ್ಳತಕ್ಕದ್ದು.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

**ಎಸ್. ಜಿಯಾವುಲ್ಲಾ**

ಸರ್ಕಾರದ ಅಧೀನ ಕಾರ್ಯದರ್ಶಿ, ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಇಲಾಖೆ (ರಾಜ್ಯ ಶಿಷ್ಟಾಚಾರ)

## DEPARTMENT OF PERSONNEL AND ADMINISTRATIVE REFORMS SECRETARIAT

## ADDENDUM

### No. DPAR 12 HHL 2003, Bangalore, Dated: 1st March 2004

Under the explanation of Section 25 of the Negotiable Instruments Act 1881 (Act No.XXVI of 1881) read with Notification No. 20/25/26/Pub.1 dated 15.6.1957 of the Government of India, Ministry of Home Affairs, the Government of Karnataka has declared additional holiday throughout the State on account of "GOOD FRIDAY" on Friday dated 9.4.2004. This shall be added below serial number 6 as 6-A of the Government Notification-II No. DPAR 12 HHL 2003 dated 27.11.2003.

By Order and in the name of the Governor of Karnataka,

P.R. 322

**S. ZIYAULLAH**

Under Secretary to Government, D.P.A.R. (Protocol)

## ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಸಚಿವಾಲಯ

**ವಿಷಯ:** ಸಚಿವ ಸಂಪುಟ ವ್ಯವಹಾರಗಳ ಶಾಖೆಯ ಪತ್ರಾಂಕಿತ ಆಪ್ತ ಸಹಾಯಕರ ಹುದ್ದೆಯನ್ನು ದಿನಾಂಕ: 24.2.2004 ರಿಂದ ಒಂದು ವರ್ಷದ ಅವಧಿಗೆ ಮುಂದುವರೆಸುವ ಬಗೆಗೆ ಆದೇಶ.

**ಓದಲಾಗಿದೆ:**
1. ಸರ್ಕಾರದ ಆದೇಶ ಸಂಖ್ಯೆ: ಸಿಆಸುಇ 4 ಸಸಿವಿ 2001, ದಿನಾಂಕ: 24.2.2001.
2. ಸರ್ಕಾರದ ಆದೇಶ ಸಂಖ್ಯೆ: ಸಿಆಸುಇ 16 ಸಸಿವಿ 2002, ದಿನಾಂಕ: 27.2.2002.
3. ಸರ್ಕಾರದ ಆದೇಶ ಸಂಖ್ಯೆ: ಸಿಆಸುಇ 26 ಸಸಿವಿ 2003, ದಿನಾಂಕ: 25.3.2003.

**ಪ್ರಸ್ತಾವನೆ:**

ಮೇಲೆ ಕ್ರಮ ಸಂಖ್ಯೆ (1)ರಲ್ಲಿ ಓದಲಾಗಿರುವ ದಿನಾಂಕ: 24.2.2001ರ ಸರ್ಕಾರದ ಆದೇಶದಲ್ಲಿ ಸಚಿವ ಸಂಪುಟ ವ್ಯವಹಾರಗಳ ಇಲಾಖೆಯಲ್ಲಿ ರೂ.6000-11200ರ ವೇತನ ಶ್ರೇಣಿಯ ಒಂದು ಪತ್ರಾಂಕಿತ ಆಪ್ತ ಸಹಾಯಕರ ಹುದ್ದೆಯನ್ನು ಒಂದು ವರ್ಷದ ಅವಧಿಗೆ ಸೃಜಿಸಲಾಗಿದ್ದಿತು. ನಂತರ ಕ್ರಮ ಸಂಖ್ಯೆ (2) ಮತ್ತು (3)ರಲ್ಲಿ ಓದಲಾಗಿರುವ ಸರ್ಕಾರದ ಆದೇಶಗಳ ಅನ್ವಯ ಈ ಹುದ್ದೆಯನ್ನು ದಿನಾಂಕ: 23.2.2004 ರವರೆಗೆ ಮುಂದುವರೆಸಲಾಗಿದೆ.

ಪ್ರಸ್ತುತ ಈ ಹುದ್ದೆಯ ವಿಸ್ತರಿತ ಕಾಲಾವಧಿಯು ಈಗಾಗಲೇ ಮುಗಿದಿರುವ ಹಿನ್ನೆಲೆಯಲ್ಲಿ ಈ ಹುದ್ದೆಯನ್ನು ದಿನಾಂಕ: 24.2.2004 ರಿಂದ ಮುಂದುವರೆಸುವ ಬಗ್ಗೆ ಪರಿಶೀಲಿಸಲಾಗಿದ್ದು, ಕೆಳಕಂಡಂತೆ ಆದೇಶಿಸಲಾಗಿದೆ.

**ಸರ್ಕಾರದ ಆದೇಶ ಸಂಖ್ಯೆ: ಸಿಆಸುಇ 12 ಸಸಿವಿ 2004, ಬೆಂಗಳೂರು, ದಿನಾಂಕ: 10ನೇ ಮಾರ್ಚ್ 2004**

ಸಚಿವ ಸಂಪುಟದ ವ್ಯವಹಾರಗಳ ಶಾಖೆಯಲ್ಲಿ ಸೃಜಿಸಲಾಗಿರುವ ಒಂದು ಪತ್ರಾಂಕಿತ ಆಪ್ತ ಸಹಾಯಕರ ಹುದ್ದೆಯನ್ನು ದಿನಾಂಕ: 24.2.2004 ರಿಂದ ಜಾರಿಗೆ ಬರುವಂತೆ ಮತ್ತೆ ಒಂದು ವರ್ಷದ ಅವಧಿಗೆ ಅಥವಾ ಮುಂದಿನ ಆದೇಶದವರೆಗೆ ತಾತ್ಕಾಲಿಕವಾಗಿ ಮುಂದುವರೆಸಲು ಮಂಜೂರಾತಿ ನೀಡಲಾಗಿದೆ.

ಈ ಆದೇಶವನ್ನು ಆರ್ಥಿಕ ಇಲಾಖೆಯ ಆದೇಶ ಸಂಖ್ಯೆ: ಆಇ 1 ಟಿಎಫ್‌ಪಿ 96 ದಿನಾಂಕ: 10.7.1996ರಲ್ಲಿ ನೀಡಿರುವ ಸಹಮತಿ ಎಂದು ಪರಿಭಾವಿಸಿ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 323

**ಯು.ಪಿ. ಪ್ರಭು**

ಸರ್ಕಾರದ ಅಧೀನ ಕಾರ್ಯದರ್ಶಿ, ಸಿಆಸುಇ (ಸೇವೆಗಳು-2)

## ಕಂದಾಯ ಸಚಿವಾಲಯ

**ವಿಷಯ:** ಇಸ್ಲಾಮಿಕ್ ಮಿಷನ್ ಆಫ್ ಇಂಡಿಯಾ (ಐಎಂಐ) ಈ ಸಂಸ್ಥೆಗೆ, ನೇಮಕ ಮಾಡಿದ ಆಡಳಿತಾಧಿಕಾರಿ ಅವಧಿ ವಿಸ್ತರಣೆ ಕುರಿತು.

**ಓದಲಾಗಿದೆ:**
1. ಸರ್ಕಾರಿ ಆದೇಶ ಸಂಖ್ಯೆ:ಕಂಇ 18 ಮುನೋಸೊ 2003, ದಿನಾಂಕ:11-8-2003.
2. ಆಡಳಿತಾಧಿಕಾರಿಗಳ ಪತ್ರ ಸಂಖ್ಯೆ:ಒಇ 196:ಕಾ:2004, ದಿನಾಂಕ:6-2-2004.

**ಪ್ರಸ್ತಾವನೆ:**

ಮೇಲೆ ಓದಲಾದ (1)ರ ಸರ್ಕಾರಿ ಆದೇಶದಲ್ಲಿ ಇಸ್ಲಾಮಿಕ್ ಮಿಷನ್ ಆಫ್ ಇಂಡಿಯಾ (ಐಎಂಐ), ನ್ಯಾಷನಲ್ ಪಾರ್ಕ್ ರಸ್ತೆ, ಬೆಂಗಳೂರು-76, ಈ ಸಂಸ್ಥೆಯು ಕರ್ನಾಟಕ ಸಂಘಗಳ ನೋಂದಣಿ ಕಾಯ್ದೆ, 1960ರ ಪ್ರಕಾರ ಕಾರ್ಯ ನಿರ್ವಹಿಸದೇ ಇದ್ದುದರಿಂದ ಸಂಸ್ಥೆಗೆ ಆಡಳಿತಾಧಿಕಾರಿಗಳನ್ನು ನೇಮಕ ಮಾಡಲಾಯಿತು. ಓದಲಾದ (2)ರಲ್ಲಿ ಸಂಸ್ಥೆಗೆ ನೇಮಕ ಮಾಡಿದ ಆಡಳಿತಾಧಿಕಾರಿಗಳು ವರದಿ ನೀಡಿ, ಸಂಸ್ಥೆಯ ವ್ಯವಹಾರಗಳನ್ನು ಸರಿಪಡಿಸಲು ಆಡಳಿತಾಧಿಕಾರಿಯವರ ಅವಧಿ ವಿಸ್ತರಣೆಯನ್ನು 6 ತಿಂಗಳ ಅವಧಿಗೆ ವಿಸ್ತರಿಸಲು ಕೋರಿರುತ್ತಾರೆ. ಈ ಹಿನ್ನೆಲೆಯಲ್ಲಿ ಆಡಳಿತಾಧಿಕಾರಿ ವರದಿಯನ್ನು ಕೂಲಂಕುಷವಾಗಿ ಪರಿಶೀಲಿಸಿ, ಸಾರ್ವಜನಿಕ ಹಿತದೃಷ್ಟಿಯಿಂದ ಸದರಿ ಸಂಸ್ಥೆಗೆ ನೇಮಕ ಮಾಡಲಾದ ಆಡಳಿತಾಧಿಕಾರಿ ಅವಧಿ ವಿಸ್ತರಿಸಲು ಸರ್ಕಾರವು ತೀರ್ಮಾನಿಸಿದೆ, ಆದರಂತೆ ಈ ಕೆಳಕಂಡ ಆದೇಶ.

**ಸರ್ಕಾರಿ ಆದೇಶ ಸಂಖ್ಯೆ: ಕಂಇ 18 ಮುನೋಸೊ 2003, ಬೆಂಗಳೂರು, ದಿನಾಂಕ: 19ನೇ ಫೆಬ್ರವರಿ 2004**

ಪ್ರಸ್ತಾವನೆಯಲ್ಲಿ ವಿವರಿಸಿರುವ ಕಾರಣಗಳ ಹಿನ್ನೆಲೆಯಲ್ಲಿ, ಸಾರ್ವಜನಿಕ ಹಿತದೃಷ್ಟಿಯಿಂದ, ಇಸ್ಲಾಮಿಕ್ ಮಿಷನ್ ಆಫ್ ಇಂಡಿಯಾ (ಐಎಂಐ), ನ್ಯಾಷನಲ್ ಪಾರ್ಕ್ ರಸ್ತೆ, ಬನ್ನೇರುಘಟ್ಟ ರಸ್ತೆ, ಬೆಂಗಳೂರು-76, ಈ ಸಂಸ್ಥೆಗೆ ಕರ್ನಾಟಕ ಸಂಘಗಳ ನೋಂದಣಿ ಕಾಯ್ದೆ, 1960ರ ಕಲಂ 27-ಎ ಪ್ರಕಾರ ನೇಮಕ ಮಾಡಲಾದ ಆಡಳಿತಾಧಿಕಾರಿಯವರ ಅವಧಿಯನ್ನು ದಿನಾಂಕ: 11-2-2004 ರಿಂದ 6 ತಿಂಗಳ ಅವಧಿಗೆ ಅಥವಾ ಸದರಿ ಸಂಸ್ಥೆಗೆ ಚುನಾವಣೆ ನಡೆಸಿ, ಚುನಾಯಿತ, ಆಡಳಿತ ಮಂಡಳಿಗೆ ಅಧಿಕಾರವನ್ನು ಹಸ್ತಾಂತರಿಸುವವರೆಗೆ, ಇದರಲ್ಲಿ ಯಾವುದು ಮೊದಲೋ ಅಲ್ಲಿಯವರೆಗೆ ನೇಮಿಸಿದೆ.

2) ಆಡಳಿತಾಧಿಕಾರಿಗಳು ಈ ಅವಧಿಯಲ್ಲಿ ಸಂಘದ ಅವ್ಯವಹಾರಗಳನ್ನು ಸರಿಪಡಿಸಿ ಚುನಾವಣೆ ನಡೆಸಿ, ಚುನಾಯಿತ ಆಡಳಿತ ಮಂಡಳಿಗೆ ಅಧಿಕಾರವನ್ನು ಹಸ್ತಾಂತರಿಸುವಂತೆ ಸೂಚಿಸಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 324

**ಎಸ್.ಜಿ. ನಾರಾಯಣ**

ಪೀಠಾಧಿಕಾರಿ, ಕಂದಾಯ ಇಲಾಖೆ (ನೋಂದಣಿ ಮತ್ತು ಮುದ್ರಾಂಕ)

**ವಿಷಯ:** ಸೆಂಟ್ರಲ್ ಎಜುಕೇಷನ್ ಸೊಸೈಟಿ, ಊರ್ಡಿಗೆರೆ, ತುಮಕೂರು ತಾಲ್ಲೂಕು ಈ ಸಂಸ್ಥೆಗೆ ನೇಮಕ ಮಾಡಿದ ಆಡಳಿತಾಧಿಕಾರಿಯವರ ಅವಧಿ ವಿಸ್ತರಣೆ ಕುರಿತು.

**ಓದಲಾಗಿದೆ:**
1. ಸರ್ಕಾರಿ ಆದೇಶ ಸಂಖ್ಯೆ:ಕಂಇ 37 ಇಎಸ್‌ಎಫ್ 94, ದಿನಾಂಕ:17-9-1996.
2. ಸರ್ಕಾರಿ ಆದೇಶ ಸಂಖ್ಯೆ:ಕಂಇ 37 ಇಎಸ್‌ಎಫ್ 94, ದಿನಾಂಕ:3-5-1997, 10-11-97, 3-6-98, 15-9-99, 24-1-2000, 31-5-2000, 8-12-2000, 28-4-2001, 17-10-2001, 23-4-2002, 12-11-2002 ಮತ್ತು 22-7-2003.
3. ಉಪ ವಿಭಾಗಾಧಿಕಾರಿಗಳು, ತುಮಕೂರು ಉಪ ವಿಭಾಗ ರವರ ಪತ್ರ ಸಂಖ್ಯೆ:ಎಸಿ. ಪಿಎ. ಸಿ.ಆ. 31/15:96-97, ದಿನಾಂಕ:29-9-2003.

**ಪ್ರಸ್ತಾವನೆ:**

ಮೇಲೆ ಓದಲಾದ (1)ರ ಸರ್ಕಾರಿ ಆದೇಶದಲ್ಲಿ ಸೆಂಟ್ರಲ್ ಎಜುಕೇಷನ್ ಸೊಸೈಟಿ, ಊರ್ಡಿಗೆರೆ, ತುಮಕೂರು ತಾಲ್ಲೂಕು ಇಲ್ಲಿಗೆ ನೇಮಿಸಲಾಗಿದ್ದ ಆಡಳಿತಾಧಿಕಾರಿಯ ಅವಧಿಯನ್ನು ಆಡಳಿತಾಧಿಕಾರಿಯವರ ಮನವಿಯಂತೆ ಮೇಲೆ ಓದಲಾದ (2)ರ ಸರ್ಕಾರಿ ಆದೇಶದಲ್ಲಿ ದಿನಾಂಕ:17-9-2003ರವರೆಗೆ ವಿಸ್ತರಿಸಲಾಯಿತು. ಓದಲಾದ (3)ರ ಪತ್ರದಲ್ಲಿ ಉಪ ವಿಭಾಗಾಧಿಕಾರಿಯ ಅವಧಿಯನ್ನು ವಿಸ್ತರಿಸುವ ಕುರಿತು ಪ್ರಸ್ತಾವನೆ ಸಲ್ಲಿಸಿದ ಹಿನ್ನೆಲೆಯಲ್ಲಿ ಸರ್ಕಾರವು ವಿಷಯವನ್ನು ಕೂಲಂಕುಷವಾಗಿ ಪರಿಶೀಲಿಸಿ, ಸಾರ್ವಜನಿಕ ಹಿತದೃಷ್ಟಿಯಿಂದ, ದಿನಾಂಕ:18-9-2003 ರಿಂದ 6 ತಿಂಗಳ ಅವಧಿಗೆ ವಿಸ್ತರಿಸಲು ಸರ್ಕಾರವು ತೀರ್ಮಾನಿಸಿದೆ. ಅದರಂತೆ ಈ ಕೆಳಕಂಡ ಆದೇಶ.

**ಸರ್ಕಾರಿ ಆದೇಶ ಸಂಖ್ಯೆ: ಕಂಇ 42 ಮುನೋಸೊ 2003, ಬೆಂಗಳೂರು, ದಿನಾಂಕ: 1ನೇ ಮಾರ್ಚ್ 2004**

ಪ್ರಸ್ತಾವನೆಯಲ್ಲಿ ವಿವರಿಸಿರುವ ಕಾರಣಗಳ ಹಿನ್ನೆಲೆಯಲ್ಲಿ ಕರ್ನಾಟಕ ಸಂಘಗಳ ನೋಂದಣಿ ಕಾಯ್ದೆ, 1960ರ ಕಲಂ 27-ಎ(5)ರಲ್ಲಿ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ, ಸೆಂಟ್ರಲ್ ಎಜುಕೇಷನ್ ಸೊಸೈಟಿ, ಊರ್ಡಿಗೆರೆ, ತುಮಕೂರು ತಾಲ್ಲೂಕು ಇದಕ್ಕೆ ನೇಮಿಸಲಾಗಿದ್ದ ಆಡಳಿತಾಧಿಕಾರಿಯ ಅವಧಿಯನ್ನು ಸಾರ್ವಜನಿಕ ಹಿತದೃಷ್ಟಿಯಿಂದ ದಿನಾಂಕ:18-9-2003 ರಿಂದ 6 (ಆರು) ತಿಂಗಳ ಅವಧಿಗೆ ಅಥವಾ ಸಂಘಕ್ಕೆ ಚುನಾವಣೆಯನ್ನು ನಡೆಸಿ ಚುನಾಯಿತ ಆಡಳಿತ ಮಂಡಳಿಗೆ ಅಧಿಕಾರವನ್ನು ಹಸ್ತಾಂತರಿಸುವವರೆಗೆ, ಇದರಲ್ಲಿ ಯಾವುದು ಮೊದಲೋ, ಅಲ್ಲಿಯವರೆಗೆ ವಿಸ್ತರಿಸಲಾಗಿದೆ.

ಈ ವಿಸ್ತರಿಸಿದ ಅವಧಿಯೊಳಗೆ ಸಂಘಕ್ಕೆ ಚುನಾವಣೆ ನಡೆಸಿ, ಚುನಾಯಿತ ಆಡಳಿತ ಮಂಡಳಿಗೆ ಅಧಿಕಾರವನ್ನು ಹಸ್ತಾಂತರಿಸುವ ಬಗ್ಗೆ ಕ್ರಮ ತೆಗೆದುಕೊಳ್ಳುವಂತೆ ಆಡಳಿತಾಧಿಕಾರಿಯವರೆಗೆ ಸೂಚಿಸಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 325

**ಎಸ್.ಜಿ. ನಾರಾಯಣ**

ಪೀಠಾಧಿಕಾರಿ, ಕಂದಾಯ ಇಲಾಖೆ (ನೋಂದಣಿ ಮತ್ತು ಮುದ್ರಾಂಕ)

**ವಿಷಯ:** ಫೈಯಜುಲ್ ಉಲುಮ್ ಎಜುಕೇಷನ್ ಸೊಸೈಟಿ, ರೋಜಾ (ಕೆ), ಗುಲ್ಬರ್ಗಾ ಈ ಸಂಸ್ಥೆಗೆ ಆಡಳಿತಾಧಿಕಾರಿ ನೇಮಕ ಕುರಿತು.

**ಓದಲಾಗಿದೆ:**
1. ಜಿಲ್ಲಾ ನೋಂದಣಾಧಿಕಾರಿ, ಗುಲ್ಬರ್ಗಾ ಜಿಲ್ಲೆ ಅವರ ವರದಿ ಸಂಖ್ಯೆ:ಡಿಆರ್‌ಜಿ:ಆರ್‌ಓಎಸ್:ಇಎನ್‌ಕ್ಯೂ: 2001-02:897, ದಿನಾಂಕ:29-7-2002.
2. ಸರ್ಕಾರದ ಕಾರಣ ಕೇಳುವ ನೋಟೀಸ್ ಸಂಖ್ಯೆ: ಕಂಇ 31 ಮುನೋಸೊ 2002, ದಿನಾಂಕ:5-9-2002.
3. ಜನರಲ್ ಸೆಕ್ರೆಟರಿ, ಫೈಯಜುಲ್ ಉಲುಮ್ ಎಜುಕೇಷನ್ ಸೊಸೈಟಿ ರೋಜಾ(ಕೆ), ಗುಲ್ಬರ್ಗಾ ಇವರ ಲಿಖಿತ ಹೇಳಿಕೆ ನಂಬರ್:ಎಫ್‌ಯುಇಎಸ್:ಇಎನ್‌ಜಿ:2002-03, ದಿನಾಂಕ:25-9-2002.
4. ಜಿಲ್ಲಾ ನೋಂದಣಾಧಿಕಾರಿಗಳು, ಗುಲ್ಬರ್ಗಾ ಜಿಲ್ಲೆ ಅವರ ಪತ್ರ ಸಂಖ್ಯೆ: ಡಿಆರ್‌ಜಿ:ರೋಸ್: 2002-03:501, ದಿನಾಂಕ:6-9-2003.

**ಪ್ರಸ್ತಾವನೆ:**

ಮೇಲೆ ಓದಲಾದ (1)ರ ಪತ್ರದಲ್ಲಿ ಜಿಲ್ಲಾ ನೋಂದಣಾಧಿಕಾರಿಗಳು, ಗುಲ್ಬರ್ಗಾ ಜಿಲ್ಲೆ ಅವರು ವರದಿ ಸಲ್ಲಿಸಿ ಫೈಯಜುಲ್ ಉಲುಮ್ ಎಜುಕೇಷನ್ ಸೊಸೈಟಿ ರೋಜಾ (ಕೆ), ಗುಲ್ಬರ್ಗಾ ಈ ಸಂಸ್ಥೆ ಕುರಿತು, ನ್ಯಾಯಾಲಯದ ಆದೇಶದಂತೆ ವಿಚಾರಣೆ ಮಾಡಲಾಗಿ ಸಂಸ್ಥೆಯು ಬೈಲಾ ಪ್ರಕಾರ ತನ್ನ ವ್ಯವಹಾರಗಳನ್ನು ನಡೆಸುತ್ತಿಲ್ಲ, ಸಂಸ್ಥೆಯಲ್ಲಿ ಅಧ್ಯಕ್ಷ : ಕಾರ್ಯದರ್ಶಿ ಬಿಟ್ಟರೆ ಬೇರೆ ಸದಸ್ಯರಿರುವುದಿಲ್ಲ ಸಂಸ್ಥೆಯು ಸರ್ವ ಸದಸ್ಯರ ಸಭೆ ಕರೆದಿರುವುದಿಲ್ಲ. ಸಂಸ್ಥೆಯ ವಿರುದ್ಧ ಅನೇಕ ಪ್ರಕರಣಗಳು ನ್ಯಾಯಾಲಯದಲ್ಲಿ ದಾಖಲಾಗಿವೆ. ಆದ್ದರಿಂದ ಸಂಸ್ಥೆಯನ್ನು ಸರಿದಾರಿಗೆ ತರುವ ದೃಷ್ಟಿಯಿಂದ ಸಂಸ್ಥೆಗೆ ಆಡಳಿತಾಧಿಕಾರಿ ನೇಮಕ ಕುರಿತು : ಮಾಡಲು ಶಿಫಾರಸ್ಸು ಮಾಡಿದ ಹಿನ್ನೆಲೆಯಲ್ಲಿ ಓದಲಾದ (2)ರ ಪ್ರಕಾರ ನೋಟೀಸ್ ಜಾರಿ ಮಾಡಿ ಲಿಖಿತ ಹೇಳಿಕೆ ಪಡೆದು ಪರಿಶೀಲಿಸಿ ಜಿಲ್ಲಾ ನೋಂದಣಾಧಿಕಾರಿಗಳಿಂದ ಲಿಖಿತ ಹೇಳಿಕೆ ಮೇಲೆ ಓದಲಾದ (4)ರ ಪ್ರಕಾರ ಮತ್ತೆ ಅಭಿಪ್ರಾಯ ಪಡೆಯಲಾಗಿ ಜಿಲ್ಲಾ ನೋಂದಣಾಧಿಕಾರಿಗಳು ತಮ್ಮ ಅಭಿಪ್ರಾಯದಲ್ಲಿ ಸಂಸ್ಥೆಯು ನಿಯಮಗಳ ಪ್ರಕಾರ ನಡೆಯುತ್ತಿಲ್ಲ, ಸಂಸ್ಥೆಯು ಸರ್ಕಾರದ ದೊಡ್ಡ ಮೊತ್ತದ ಹಣವನ್ನು ದುರುಪಯೋಗಪಡಿಸಿಕೊಂಡಿದೆ. ಈ ಸಂಬಂಧ ಪ್ರಕರಣ ದಾಖಲಾಗಿದೆ ಆದ್ದರಿಂದ ದಿನಾಂಕ:29-7-2002ರ ವರದಿಯಲ್ಲಿ ಶಿಫಾರಸ್ಸು ಮಾಡಿರುವಂತೆ ಸಂಸ್ಥೆಗೆ ಆಡಳಿತಾಧಿಕಾರಿ ನೇಮಕ ಮಾಡಲು ಪುನರುಚ್ಚರಿಸಿರುತ್ತಾರೆ. ಸಂಸ್ಥೆಯ ಲಿಖಿತ ಹೇಳಿಕೆ ಹಾಗೂ ಜಿಲ್ಲಾ ನೋಂದಣಾಧಿಕಾರಿಗಳ ವರದಿಗಳನ್ನು ಗಂಭೀರವಾಗಿ ಪರಿಶೀಲಿಸಿದ ಸರ್ಕಾರವು ಸಂಸ್ಥೆಯ ಹೇಳಿಕೆಯು ತೃಪ್ತಿದಾಯಕವಲ್ಲವೆಂದು ಅಭಿಪ್ರಾಯಪಟ್ಟು ಸಂಸ್ಥೆಯ ಹಿತದೃಷ್ಟಿಯಿಂದ ಆಡಳಿತಾಧಿಕಾರಿ ನೇಮಿಸಲು ಸರ್ಕಾರವು ತೀರ್ಮಾನಿಸಿದೆ. ಅದರಂತೆ ಈ ಕೆಳಕಂಡ ಆದೇಶ.

**ಸರ್ಕಾರಿ ಆದೇಶ ಸಂಖ್ಯೆ: ಕಂಇ 31 ಮುನೋಸೊ 2001, ಬೆಂಗಳೂರು, ದಿನಾಂಕ: 27ನೇ ಫೆಬ್ರವರಿ 2004**

ಪ್ರಸ್ತಾವನೆಯಲ್ಲಿ ವಿವರಿಸಿರುವ ಕಾರಣಗಳ ಹಿನ್ನೆಲೆಯಲ್ಲಿ ಫೈಯಜುಲ್ ಎಜುಕೇಷನ್ ಸೊಸೈಟಿ ರೋಜಾ(ಕೆ), ಗುಲ್ಬರ್ಗಾ, ಈ ಸಂಸ್ಥೆಗೆ ಸಾರ್ವಜನಿಕ ಹಿತದೃಷ್ಟಿಯಿಂದ ಕರ್ನಾಟಕ ಸಂಘಗಳ ನೋಂದಣಿ ಕಾಯ್ದೆ 1960ರ ಕಲಂ 27-ಎ ಪ್ರಕಾರ ಉಪ ವಿಭಾಗಾಧಿಕಾರಿ, ಬೀದರ್ ಉಪ ವಿಭಾಗ, ಬೀದರ್ ರವರನ್ನು ಆಡಳಿತಾಧಿಕಾರಿಯಾಗಿ 6 ತಿಂಗಳ ಅವಧಿಗೆ ಅಥವಾ ಸಂಸ್ಥೆಗೆ ಚುನಾವಣೆ ನಡೆಸಿ ಚುನಾಯಿತ ಆಡಳಿತ ಮಂಡಳಿಗೆ ಅಧಿಕಾರ ಹಸ್ತಾಂತರಿಸುವವರೆಗೆ ಇದರಲ್ಲಿ ಯಾವುದು ಮೊದಲೋ ಅಲ್ಲಿಯವರೆಗೆ ವಿಸ್ತರಿಸಿ ಆದೇಶಿಸಿದೆ.

ಆಡಳಿತಾಧಿಕಾರಿಗಳು ಈ ಅವಧಿಯಲ್ಲಿ ಸಂಸ್ಥೆಯ ಅವ್ಯವಹಾರಗಳನ್ನು ಸರಿಪಡಿಸಿ ಚುನಾವಣೆ ನಡೆಸಿ ಚುನಾಯಿತ ಆಡಳಿತ ಮಂಡಳಿಗೆ ಅಧಿಕಾರ ಹಸ್ತಾಂತರಿಸಲು ಸೂಚಿಸಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 326

**ಎಸ್.ಜಿ. ನಾರಾಯಣ**

ಪೀಠಾಧಿಕಾರಿ, ಕಂದಾಯ ಇಲಾಖೆ (ನೋಂದಣಿ ಮತ್ತು ಮುದ್ರಾಂಕ)

ಸಮಾಜ ಕಲ್ಯಾಣ ಸಚಿವಾಲಯ

ಸೇರ್ಪಡೆ

ಸಂಖ್ಯೆ:ಸಕಇ 41 ಬಿಇಟಿ 2004, ಬೆಂಗಳೂರು, ದಿನಾಂಕ: 10ನೇ ಮಾರ್ಚ್ 2004

ಸರ್ಕಾರದ ಆದೇಶ ಸಂಖ್ಯೆ:ಸಕಇ 41 ಬಿಇಟಿ 2004, ದಿನಾಂಕ:20-2-2004ರ ಆದೇಶ ಭಾಗದಲ್ಲಿನ 4ನೇ ಸಾಲಿನಲ್ಲಿ ಸೂಪರ್ ಟೈಂ ಸ್ಕೇಲ್ ಎಂಬುದರ ಅನಂತರ ಈ ಕೆಳಕಂಡಂತೆ ಸೇರ್ಪಡೆ ಮಾಡಿಕೊಂಡು ಓದಿಕೊಳ್ಳತಕ್ಕದ್ದು.

"ಹುದ್ದೆಗೆ ತಾತ್ಕಾಲಿಕವಾಗಿ ಉನ್ನತೀಕರಿಸಿ ಸದರಿ ಅಧಿಕಾರಿಯು ಆಯುಕ್ತರು, ಹಿಂದುಳಿದ ವರ್ಗಗಳ ಇಲಾಖೆ, ಈ ಹುದ್ದೆಯಲ್ಲಿ ಮುಂದುವರೆಯುವವರೆಗೆ ಅಥವಾ ಸರ್ಕಾರದಿಂದ ಮುಂದಿನ ಆದೇಶವಾಗುವವರೆವಿಗೆ ಅಂದರೆ ಇವೆರಡರಲ್ಲಿ ಯಾವುದು ಮೊದಲೋ ಅಲ್ಲಿಯವರೆಗೆ"

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 327

ಎಂ.ಎಸ್. ಮರುಳಸಿದ್ದಯ್ಯ

ಸರ್ಕಾರದ ಅಧೀನ ಕಾರ್ಯದರ್ಶಿ, ಸಮಾಜ ಕಲ್ಯಾಣ ಇಲಾಖೆ.

**ವಿಷಯ:** ಕರ್ನಾಟಕ ಪರಿಶಿಷ್ಟ ಜಾತಿ ಮತ್ತು ಪರಿಶಿಷ್ಟ ವರ್ಗಗಳ ಅಭಿವೃದ್ಧಿ ನಿಗಮದಿಂದ ಗಂಗಾ ಕಲ್ಯಾಣ ಯೋಜನೆಯಡಿ ಕೊರೆದ ಕೊಳವೆ ಬಾವಿಗಳಿಗೆ ವಿದ್ಯುದ್ದೀಕರಣಗೊಳಿಸಲು ಹಣ ಬಿಡುಗಡೆ ಮಾಡುವ ಬಗ್ಗೆ.

**ಓದಲಾಗಿದೆ:**
1. ವ್ಯವಸ್ಥಾಪಕ ನಿರ್ದೇಶಕರು, ಕರ್ನಾಟಕ ಪರಿಶಿಷ್ಟ ಜಾತಿ ಮತ್ತು ಪರಿಶಿಷ್ಟ ವರ್ಗದ ಅಭಿವೃದ್ಧಿ ನಿಗಮ ಬೆಂಗಳೂರು ಇವರ ಅ.ಸ.ಪತ್ರ ಸಂಖ್ಯೆ:ಕಪಜಾಪವಅನಿ/ಗಂಕಯೋ/ವಿಪ್ರಸ/2003-04 ದಿ: 17-11-03.
2. ದಿ: 16-2-04 ರಂದು ಸರ್ಕಾರದ ಮುಖ್ಯ ಕಾರ್ಯದರ್ಶಿಯವರ ಅಧ್ಯಕ್ಷತೆಯಲ್ಲಿ ನಡೆದ ಸಭೆ.

**ಪ್ರಸ್ತಾವನೆ:**

ಕರ್ನಾಟಕ ಪರಿಶಿಷ್ಟ ಜಾತಿ ಮತ್ತು ಪರಿಶಿಷ್ಟ ವರ್ಗಗಳ ಅಭಿವೃದ್ಧಿ ನಿಗಮದಿಂದ ಪರಿಶಿಷ್ಟ ಜಾತಿ ಮತ್ತು ಪರಿಶಿಷ್ಟ ವರ್ಗಗಳಿಗೆ ಗಂಗಾ ಕಲ್ಯಾಣ ಯೋಜನೆಯಡಿ ಕೊರೆದ ಕೊಳವೆಬಾವಿಗಳಿಗೆ ಕರ್ನಾಟಕ ವಿದ್ಯುತ್ ಪ್ರಸರಣ ನಿಗಮದ ಮುಖಾಂತರ ವಿದ್ಯುದ್ದೀಕರಣ ಗೊಳಿಸಲು ವಿಶೇಷ ಘಟಕ ಯೋಜನೆ/ಗಿರಿಜನ ಉಪಯೋಜನೆಯಡಿ ಪರಿಶಿಷ್ಟ ಜಾತಿಗೆ ರೂ.75.00 ಕೋಟಿ ಮತ್ತು ಪರಿಶಿಷ್ಟ ವರ್ಗಕ್ಕೆ ರೂ.19.00 ಕೋಟಿ ವಾರ್ಷಿಕ ಯೋಜನಾ ವೆಚ್ಚದಲ್ಲಿ ನಿಗದಿಪಡಿಸಲಾಗಿದೆ.

ವ್ಯವಸ್ಥಾಪಕ ನಿರ್ದೇಶಕರು ಕರ್ನಾಟಕ ವಿದ್ಯುತ್ ಪ್ರಸರಣ ನಿಗಮ ಇವರು ಆಯವ್ಯಯದಲ್ಲಿ ವಿದ್ಯುತ್ ಪ್ರಸರಣ ಮತ್ತು ವಿದ್ಯುತ್ ಸರಬರಾಜು ಕಂಪನಿಗೆ ಹಣವನ್ನು ಒದಗಿಸಿಲ್ಲದ ಕಾರಣ ವಿಶೇಷ ಘಟಕ ಯೋಜನೆ ಗಿರಿಜನ ಉಪಯೋಜನೆಯಡಿ ಗಂಗಾ ಕಲ್ಯಾಣ ಯೋಜನೆಯಡಿ ಪರಿಶಿಷ್ಟ ಜಾತಿ ಮತ್ತು ಪರಿಶಿಷ್ಟ ವರ್ಗಗಳಿಗೆ ಕೊರೆದ ಕೊಳವೆಬಾವಿಗಳಿಗೆ ವಿದ್ಯುದ್ದೀಕರಣಗೊಳಿಸಲು ಸಾಧ್ಯವಾಗುತ್ತಿಲ್ಲವೆಂದು ಮತ್ತು ಸಮಾಜ ಕಲ್ಯಾಣ ಇಲಾಖೆಯಿಂದ ಹಣ ಬಿಡುಗಡೆಯಾಗದ ಹೊರತು ವಿದ್ಯುದ್ದೀಕರಣಗೊಳಿಸಲು ಸಾಧ್ಯವಿಲ್ಲವೆಂದು ತಿಳಿಸಿದ್ದಾರೆ. ಟ್ರಾನ್ಸ್‌ಫಾರ್ಮರ್ ಅಳವಡಿಸಿ ವಿದ್ಯುದ್ದೀಕರಣಗೊಳಿಸಲು ರೂ.50,000-00 ಖರ್ಚಾಗುತ್ತದೆ. ಇದರಲ್ಲಿ ರೂ. 25,000-00 ಗಳನ್ನು ವಿದ್ಯುತ್ ಪ್ರಸರಣ ನಿಗಮವು ಭರಿಸುವುದೆಂದು, ಉಳಿದ ರೂ.25,000-00 ನ್ನು ಪರಿಶಿಷ್ಟ ಜಾತಿ ಮತ್ತು ಪರಿಶಿಷ್ಟ ವರ್ಗಗಳ ಫಲಾನುಭವಿಗಳ ಪರವಾಗಿ ಭರಿಸಬೇಕೆಂದು ಕೋರಿರುತ್ತಾರೆ.

ದಿ:16-2-2004 ರಂದು ಉಲ್ಲೇಖ (2)ರಲ್ಲಿ ಸರ್ಕಾರದ ಮುಖ್ಯ ಕಾರ್ಯದರ್ಶಿಯವರ ಅಧ್ಯಕ್ಷತೆಯಲ್ಲಿ ನಡೆದ ಸಭೆಯಲ್ಲಿ ವ್ಯವಸ್ಥಾಪಕ ನಿರ್ದೇಶಕರು ಕರ್ನಾಟಕ ವಿದ್ಯುತ್ ಪ್ರಸರಣ ನಿಗಮ ಇವರು ವಿಶೇಷ ಘಟಕ ಯೋಜನೆ/ ಗಿರಿಜನ ಉಪಯೋಜನೆಯಡಿ ಸರ್ಕಾರ ವಾರ್ಷಿಕ ಯೋಜನೆ ವೆಚ್ಚ ನಿಗದಿಪಡಿಸಿದ್ದರೂ ಸರ್ಕಾರದಿಂದ ನಿಗದಿಪಡಿಸಿದಂತಹ ಹಣವನ್ನು ಪೂರ್ವಾಭಾವಿ ಫಲಾನುಭವಿಗಳ ಅಭಿವೃದ್ಧಿಗೆ ಬಿಡುಗಡೆ ಮಾಡದೇ ಇರುವುದರಿಂದ ಗಂಗಾ ಕಲ್ಯಾಣ ಯೋಜನೆಯಡಿ ಕೊರೆದ ಕೊಳವೆಬಾವಿಗಳಿಗೆ ವಿದ್ಯುದ್ದೀಕರಣಗೊಳಿಸಲು ಸಾಧ್ಯವಿಲ್ಲವೆಂದು ತಿಳಿಸಿದರು. ಕರ್ನಾಟಕ ಪರಿಶಿಷ್ಟ ಜಾತಿ ಮತ್ತು ಪರಿಶಿಷ್ಟ ವರ್ಗಗಳ ಅಭಿವೃದ್ಧಿ ನಿಗಮದಿಂದ ಕೊರೆದ ಕೊಳವೆಬಾವಿಗಳಿಗೆ ವಿದ್ಯುದ್ದೀಕರಣಗೊಳಿಸಲು ಪ್ರತ್ಯೇಕವಾಗಿ ಹಣ ಬಿಡುಗಡೆಯಾಗಿರುವುದಿಲ್ಲವಾದುದರಿಂದ, ಸದರಿ ಹಣವನ್ನು ಗಂಗಾ ಕಲ್ಯಾಣ ಯೋಜನೆ ಅನುಷ್ಠಾನವಾದಾಗಿನಿಂದ ವಿದ್ಯುತ್ ಪ್ರಸರಣ ನಿಗಮವೇ ವಿದ್ಯುದ್ದೀಕರಣಗೊಳಿಸಲು ಖರ್ಚು ಮಾಡಬೇಕಾಗುತ್ತದೆ.

ಈ ಹಣವನ್ನು ಕರ್ನಾಟಕ ವಿದ್ಯುತ್ ಪ್ರಸರಣ ನಿಗಮದ ಹಣದಿಂದಲೇ ಗಂಗಾ ಕಲ್ಯಾಣ ಯೋಜನೆ ಅನುಷ್ಠಾನವಾದಾಗಿನಿಂದ ವಿದ್ಯುತ್ ಪ್ರಸರಣ ನಿಗಮವೇ ವಿದ್ಯುದ್ದೀಕರಣಗೊಳಿಸಲು ಖರ್ಚು ಮಾಡಿರುತ್ತದೆ. ಘಟಕ ವೆಚ್ಚ ರೂ.75,000-00 ನಿಗದಿಪಡಿಸಿರುವುದರಿಂದ ಸಮಾಜ ಕಲ್ಯಾಣ ಇಲಾಖೆಗೆ ಹೆಚ್ಚುವರಿಯಾಗಿ ರೂ.25,000-00 ಗಳನ್ನು ವಿದ್ಯುದ್ದೀಕರಣಕ್ಕೆ ಹೆಚ್ಚುವರಿಯಾಗಿ ಖರ್ಚು ಮಾಡಲು ಅಸಾಧ್ಯವೆಂದು ವ್ಯವಸ್ಥಾಪಕ ನಿರ್ದೇಶಕರು ಕರ್ನಾಟಕ ಪರಿಶಿಷ್ಟ ಜಾತಿ ಮತ್ತು ಪರಿಶಿಷ್ಟ ವರ್ಗಗಳ ಅಭಿವೃದ್ಧಿ ನಿಗಮ ಇವರು ತಿಳಿಸಿರುತ್ತಾರೆ. ವಿಶೇಷ ಘಟಕ ಯೋಜನೆ/ಗಿರಿಜನ ಉಪಯೋಜನೆಯಡಿ ವಾರ್ಷಿಕ ಯೋಜನಾ ವೆಚ್ಚದಲ್ಲಿ ನಿಗದಿಪಡಿಸಿದ ಪ್ರಕಾರ ಕರ್ನಾಟಕ ವಿದ್ಯುತ್ ಪ್ರಸರಣ ನಿಗಮ ಹಣವನ್ನು ಖರ್ಚು ಮಾಡಲು ಮತ್ತು ವಿದ್ಯುದ್ದೀಕರಣವನ್ನು ಪರಿಶಿಷ್ಟ ಜಾತಿ ಮತ್ತು ಪರಿಶಿಷ್ಟ ವರ್ಗಗಳ ಫಲಾನುಭವಿಗಳಿಗೆ ವಿಶೇಷ ಘಟಕ ಯೋಜನೆ/ಗಿರಿಜನ ಉಪಯೋಜನಾ ವೆಚ್ಚದಲ್ಲಿ ಖರ್ಚು ಮಾಡಲು ಕ್ರಮ ಕೈಗೊಳ್ಳಬೇಕಾಗುತ್ತದೆ.

ಅಲ್ಲದೆ ಎಲ್ಲಾ ಕೊಳವೆಬಾವಿಗಳು ಪೂರ್ಣವಾಗಿದ್ದು, ವಿದ್ಯುದ್ದೀಕರಣಕ್ಕೆ ಬಾಕಿ ಇರುವ 4290 ಕೊಳವೆಬಾವಿಗಳಿಗೆ ವಿದ್ಯುದ್ದೀಕರಣಗೊಳಿಸಲು ಒಟ್ಟಾರೆ ವೆಚ್ಚ ರೂ.1072.50 ಲಕ್ಷಗಳು ಮತ್ತು ಪ್ರಗತಿಯಲ್ಲಿರುವ 4322 ಕೊಳವೆಬಾವಿಗಳಿಗೆ ವಿದ್ಯುದ್ದೀಕರಣ ಗೊಳಿಸಲು ರೂ.1080.50 ಲಕ್ಷಗಳು ಅಂದರೆ ಒಟ್ಟು ರೂ.2153.00 ಲಕ್ಷಗಳ ಹಣವನ್ನು ವಿಶೇಷ ಘಟಕ ಯೋಜನೆ ಗಿರಿಜನ ಉಪಯೋಜನೆಯಡಿ ಅಥವಾ ಬೇರೆ ಯಾವುದಾದರೂ ಲೆಕ್ಕ ಶೀರ್ಷಿಕೆಯಲ್ಲಿ ಕರ್ನಾಟಕ ಪರಿಶಿಷ್ಟ ಜಾತಿ ಮತ್ತು ಪರಿಶಿಷ್ಟ ವರ್ಗಗಳ

ಅಭಿವೃದ್ಧಿ ನಿಗಮದಿಂದ ವಿದ್ಯುದ್ದೀಕರಣದ ವೆಚ್ಚ ಮತ್ತು ಠೇವಣಿ ಹಣವನ್ನು ಕಟ್ಟಲು ಒತ್ತಾಯಿಸದೇ, ಇಂಧನ ಇಲಾಖೆಗೆ ಬಿಡುಗಡೆ ಮಾಡುವಂತೆ ವ್ಯವಸ್ಥಾಪಕ ನಿರ್ದೇಶಕರು, ಕರ್ನಾಟಕ ಪರಿಶಿಷ್ಟ ಜಾತಿ ಮತ್ತು ಪರಿಶಿಷ್ಟ ವರ್ಗಗಳ ಅಭಿವೃದ್ಧಿ ನಿಗಮ ಇವರು ಕೋರಿರುತ್ತಾರೆ. ಪ್ರಸ್ತಾವನೆಯನ್ನು ಪರಿಶೀಲಿಸಿ ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂ:ಸಕಇ 152 ಎಸ್‌ಡಿಸಿ 02(ಭಾಗ-1), ಬೆಂಗಳೂರು, ದಿನಾಂಕ: 10ನೇ ಮಾರ್ಚ್ 2004**

ಪ್ರಸ್ತಾವನೆಯನ್ನು ಪರಿಶೀಲಿಸಲಾಯಿತು. ಕರ್ನಾಟಕ ಪರಿಶಿಷ್ಟ ಜಾತಿ ಮತ್ತು ಪರಿಶಿಷ್ಟ ವರ್ಗಗಳ ಅಭಿವೃದ್ಧಿ ನಿಗಮದಿಂದ ಗಂಗಾ ಕಲ್ಯಾಣ ಯೋಜನೆಯಡಿ ಕೊರೆದ ಎಲ್ಲಾ ಕೊಳವೆಬಾವಿಗಳಿಗೆ ಓ.ವೈ.ಟಿ. (OYT) ಯೋಜನೆಯಡಿ ಅವುಗಳನ್ನು ತಾರದೆ ಹಳೆಯ ಯೋಜನೆಯಡಿಯಲ್ಲಿ 30 ದಿವಸದೊಳಗಾಗಿ ವಿದ್ಯುದ್ದೀಕರಣಗೊಳಿಸುವಂತೆ ಕರ್ನಾಟಕ ವಿದ್ಯುತ್ ಸರಬರಾಜು ಪ್ರಸರಣ ನಿಗಮಕ್ಕೆ ಸೂಚಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 328 **ಎಂ.ಎಸ್. ಮರುಳಸಿದ್ದಯ್ಯ**

ಸರ್ಕಾರದ ಅಧೀನ ಕಾರ್ಯದರ್ಶಿ, ಸಮಾಜ ಕಲ್ಯಾಣ ಇಲಾಖೆ.

**ನಗರಾಭಿವೃದ್ಧಿ ಸಚಿವಾಲಯ**

**ವಿಷಯ:** ಬೆಂಗಳೂರು-ಮೈಸೂರು ಇನ್‌ಫ್ರಾಸ್ಟ್ರಕ್ಚರ್ ಕಾರಿಡಾರ್ ಏರಿಯಾ ಸ್ಥಳೀಯ ಯೋಜನಾ ಪ್ರದೇಶಕ್ಕೆ ತಯಾರಿಸಲಾಗಿರುವ ಸ್ಥಲಾಭಿವೃದ್ಧಿ ಯೋಜನೆಗೆ ಅಂತಿಮ ಅನುಮೋದನೆ ನೀಡುವ ಬಗ್ಗೆ.

**ಓದಲಾಗಿದೆ:**
1. ಸರ್ಕಾರದ ಆದೇಶ ಸಂ.ನಅಇ 75 ಬೆಂರೂಪ್ರಾ 2003, ದಿನಾಂಕ 8.5.2003.
2. ನಿರ್ದೇಶಕರು, ನಗರ ಯೋಜನಾ ಇಲಾಖೆ, ಬೆಂಗಳೂರು, ಇವರ ಕಡತ ಸಂ.ಬಿಎಂಐಎಪಿಎ:ಸ್ಥೂಅಯೋ: 2003, ದಿನಾಂಕ:29.12.2003.
3. ಸದಸ್ಯ ಕಾರ್ಯದರ್ಶಿ, ಬಿಎಂಐಸಿಎಪಿಎ, ಬೆಂಗಳೂರು, ಇವರ ಪತ್ರ ಸಂ.ಬಿಎಂಐಸಿಎಪಿಎ:ಸ್ಥೂಅಯೋ: ಅಂತಿಮ:2003, ದಿನಾಂಕ: 9.12.2003 ಮತ್ತು 9.1.2004.

**ಪ್ರಸ್ತಾವನೆ:**

ಮೇಲೆ ಓದಲಾದ (1)ರ ಆದೇಶದಲ್ಲಿ ಬೆಂಗಳೂರು-ಮೈಸೂರು ಇನ್‌ಫ್ರಾಸ್ಟ್ರಕ್ಚರ್ ಕಾರಿಡಾರ್ ಏರಿಯಾ ಸ್ಥಳೀಯ ಯೋಜನಾ ಪ್ರದೇಶಕ್ಕೆ ತಯಾರಿಸಲಾಗಿರುವ ಸ್ಥೂಲಾಭಿವೃದ್ಧಿ ಯೋಜನೆಗೆ ತಾತ್ಕಾಲಿಕ ಅನುಮೋದನೆ ನೀಡಿರುತ್ತದೆ.

1991ರ ಜನಗಣತಿಯಂತೆ ಬೆಂಗಳೂರು-ಮೈಸೂರು ಇನ್‌ಫ್ರಾಸ್ಟ್ರಕ್ಚರ್ ಕಾರಿಡಾರ್ ಏರಿಯಾ ಸ್ಥಳೀಯ ಯೋಜನಾ ಪ್ರದೇಶದ ವ್ಯಾಪ್ತಿಯ ಜನಸಂಖ್ಯೆಯು 2.18 ಲಕ್ಷದಷ್ಟಿದ್ದು, ಮುಂದಿನ 20 ವರ್ಷಗಳ ಅವಧಿಗೆ ಅಂದರೆ 2021ರ ವೇಳೆಗೆ ಯೋಜನೆಯಲ್ಲಿ ಪ್ರಸ್ತಾಪಿಸಿರುವ 5 ಟೌನ್‌ಶಿಪ್‌ಗಳನ್ನು ಒಳಗೊಂಡಂತೆ ಬರಬಹುದಾದ ಜನಸಂಖ್ಯೆ 10.05 ಲಕ್ಷವೆಂದು ಅಂದಾಜಿಸಿ ಈ ವ್ಯಾಪ್ತಿಯಲ್ಲಿನ ಸಾಮಾಜಿಕ ಮತ್ತು ಆರ್ಥಿಕ ಸ್ಥಿತಿಗತಿ, ಈ ಕಾರಿಡಾರಿನಲ್ಲಿನ ವಾಹನ ಸಂಚಾರ ಸಮಸ್ಯೆಗಳನ್ನು ವಿಶ್ಲೇಷಿಸಿ ಯೋಜನಾ ತತ್ವ ಮತ್ತು ಸ್ಥೂಲಾಭಿವೃದ್ಧಿ ಯೋಜನೆ ತಯಾರಿಕೆ ಬಗ್ಗೆ ಕರ್ನಾಟಕ ನಗರ ಮತ್ತು ಗ್ರಾಮಾಂತರ ಯೋಜನಾ ಕಾಯ್ದೆ, 1961ರ ಪ್ರಕರಣ 12 ರಲ್ಲಿ ನಿಗದಿಪಡಿಸಿರುವ ಅಂಶಗಳನ್ನು ಪರಿಗಣಿಸಿ ಸ್ಥೂಲಾಭಿವೃದ್ಧಿ ಯೋಜನೆಯನ್ನು ರೂಪಿಸಲಾಗಿದೆಯೆಂದು, ಈ ಯೋಜನಾ ಪ್ರದೇಶದ ವ್ಯಾಪ್ತಿಯು 701.00 ಚ.ಕಿ.ಮೀ.ಗಳಿದ್ದು, 140 ಪೂರ್ಣ ಕಂದಾಯ ಗ್ರಾಮಗಳು, 54 ಭಾಗಶಃ ಗ್ರಾಮಗಳು ಮತ್ತು ಮದ್ದೂರು ಪಟ್ಟಣವು ಈ ಯೋಜನಾ ವ್ಯಾಪ್ತಿಗೆ ಒಳಪಟ್ಟಿರುತ್ತದೆಂದು, ಯೋಜನೆಯಲ್ಲಿ 111 ಕಿ.ಮೀ. ಉದ್ದದ ಬೆಂಗಳೂರು-ಮೈಸೂರು ಎಕ್ಸ್‌ಪ್ರೆಸ್ ವೇ ನಿರ್ಮಾಣ, 41 ಕಿ.ಮೀ. ಉದ್ದದ ಫೆರಿಫೆರಲ್ ರಸ್ತೆ ನಿರ್ಮಾಣ, 9.10 ಕಿ.ಮೀ ಉದ್ದದ ಲಿಂಕ್ ರಸ್ತೆ ನಿರ್ಮಾಣ ಹಾಗೂ 5 ಹೊಸ ಟೌನ್‌ಶಿಪ್‌ಗಳನ್ನು ಅಭಿವೃದ್ಧಿಪಡಿಸುವುದೆಂದು ತಿಳಿಸುತ್ತಾ, ಸ್ಥಳೀಯ ಯೋಜನಾ ಪ್ರದೇಶದಲ್ಲಿನ ಮುಂದಿನ ಬೆಳವಣಿಗೆಗಾಗಿ ಒಟ್ಟು 16256.22 ಹೆಕ್ಟೇರ್ ಪ್ರದೇಶವನ್ನು ಪ್ರಸ್ತಾಪಿಸಲಾಗಿದ್ದು, ಇದರಲ್ಲಿ ವಸತಿಗಾಗಿ 6291.88 ಹೆಕ್ಟೇರ್, ವಾಣಿಜ್ಯಕ್ಕಾಗಿ 2875.37 ಹೆಕ್ಟೇರ್, ಕೈಗಾರಿಕೆಗಾಗಿ 741.75 ಹೆಕ್ಟೇರ್, ಸಾರ್ವಜನಿಕ/ಅರೆ ಸಾರ್ವಜನಿಕ ಉದ್ದೇಶಕ್ಕಾಗಿ 552.43 ಹೆಕ್ಟೇರ್ ಉದ್ಯಾನ ಬಯಲು ಜಾಗಕ್ಕಾಗಿ, 1847.46 ಹೆಕ್ಟೇರ್, ಸಾರಿಗೆ ಮತ್ತು ಸಂಪರ್ಕಕ್ಕಾಗಿ, 3931.63 ಹೆಕ್ಟೇರ್ ಹಾಗೂ 5364.44 ಹೆಕ್ಟೇರ್ ಪ್ರದೇಶವನ್ನು ವ್ಯವಸಾಯ ವಲಯಕ್ಕಾಗಿ ಕಾಯ್ದಿರಿಸಿ ಅಂತಿಮವಾಗಿ ರೂಪಿಸಲಾಗಿದೆಯೆಂದು ತಿಳಿಸಿರುತ್ತಾರೆ ಹಾಗೂ ಈ ಯೋಜನೆಯ ಬಗ್ಗೆ ಸಾರ್ವಜನಿಕರಿಂದ ಸಲಹೆ ಹಾಗೂ ಆಕ್ಷೇಪಣೆಗಳನ್ನು ನೀಡಲು ಒಂದು ತಿಂಗಳ ಕಾಲಾವಕಾಶ ನೀಡಲಾಗಿ ಒಟ್ಟು 37 ಆಕ್ಷೇಪಣೆಗಳು ಸ್ವೀಕೃತವಾಗಿದ್ದು, ಅವುಗಳನ್ನು ದಿನಾಂಕ: 6.8.2003 ರಂದು ನಡೆದ ಪ್ರಾಧಿಕಾರದ ಸಭೆಯಲ್ಲಿ ಚರ್ಚಿಸಿ, ಈ ಬಗ್ಗೆ ಸಭೆಯಲ್ಲಿ ತೆಗೆದುಕೊಂಡ ನಿರ್ಣಯದಂತೆ ಸ್ಥೂಲಾಭಿವೃದ್ಧಿ ಯೋಜನೆಯಲ್ಲಿ ಸೂಕ್ತ ಬದಲಾವಣೆ ಮಾಡಲಾಗಿದೆಯೆಂದು ತಿಳಿಸಿರುತ್ತಾರೆ.

ಪ್ರಸ್ತಾವನೆಯನ್ನು ಕೂಲಂಕಷವಾಗಿ ಪರಿಶೀಲಿಸಿ ಸರ್ಕಾರವು ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂ.ನಅಇ 75 ಬೆಂರೂಪ್ರಾ 2003, ಬೆಂಗಳೂರು, ದಿನಾಂಕ: 12ನೇ ಫೆಬ್ರವರಿ 2004**

ಬೆಂಗಳೂರು-ಮೈಸೂರು ಇನ್‌ಫಾಸ್ಟ್ರಕ್ಚರ್ ಕಾರಿಡಾರ್ ಏರಿಯಾ ಸ್ಥಳೀಯ ಯೋಜನಾ ಪ್ರದೇಶಕ್ಕೆ ತಯಾರಿಸಲಾಗಿರುವ ಸ್ಥಲಾಭಿವೃದ್ಧಿ ಯೋಜನೆಗೆ ಕರ್ನಾಟಕ ನಗರ ಮತ್ತು ಗ್ರಾಮಾಂತರ ಯೋಜನಾ ಕಾಯ್ದೆ 1961ರ ಪ್ರಕರಣ 13(3) ರನ್ವಯ ಅಂತಿಮ ಅನುಮೋದನೆಯನ್ನು ಈ ಕೆಳಕಂಡ ಷರತ್ತಿಗೊಳಪಟ್ಟು ನೀಡಲಾಗಿದೆ.

1. ರಿಟ್ ಅರ್ಜಿ ಸಮ.17823/99 ರಲ್ಲಿ ಉಚ್ಚ-ನ್ಯಾಯಾಲಯವು ನೀಡಿರುವ ಆದೇಶದನ್ವಯ ಗೊಟ್ಟಿಗೆರೆ ಕೆರೆಯನ್ನು ವಿಭಜಿಸದೇ ಹಾಗೂ ಕೆರೆಯ ಒಳಹರಿವಿಗೆ ಯಾವುದೇ ಅಡಚಣೆಯಾಗದಂತೆ ಲೋಕೋಪಯೋಗಿ ಇಲಾಖೆಯು ನಿಗದಿಪಡಿಸಿದ ರಸ್ತೆಯಲ್ಲಿ ರಸ್ತೆ ಪಂಕ್ತೀಕರಣ ಮತ್ತು ನಿರ್ಮಾಣದ ವಿಧಾನವನ್ನು ಅನುಸರಿಸಿ ನಂದಿ ಇನ್‌ಫ್ರಾಸ್ಟ್ರಕ್ಚರ್ ಕಾರಿಡಾರ್ ಸಂಸ್ಥೆಯು ರಸ್ತೆಯನ್ನು ನಿರ್ಮಾಣಗೊಳಿಸತಕ್ಕದ್ದು.

2. ಯೋಜನೆಯ ವರದಿ ಪುಟ ಸಂ.81 ಮತ್ತು 82 ರಲ್ಲಿ (i) ಪ್ಯಾರಾ 4.03.1 IIರಲ್ಲಿ ಅಪ್ರೂವಲ್ ಟು ಸೆಲ್ಫ್ ಸಸ್ಟೇನಬಲ್ ಟೌನ್‌ಶಿಪ್ ಆಫ್ ಬಿ.ಎಂ.ಐ.ಸಿ.ಪಿ. ಶೀರ್ಷಿಕೆಯಲ್ಲಿ ರೆಗ್ಯುಲೇಷನ್ ಆಫ್ ಟೌನ್‌ಶಿಪ್‌ನಲ್ಲಿ ಅಂಶಗಳನ್ನು ಮಾತ್ರ ಅಳವಡಿಸಿಕೊಳ್ಳತಕ್ಕದ್ದು.

"The minimum size of township shall be 400 Hectares."

iii ಪ್ಯಾರಾ 4.03.1-II ರಲ್ಲಿ ಈ ಕೆಳಕಂಡ ನಿಬಂಧನೆಗಳನ್ನು ಅಳವಡಿಸಿಕೊಳ್ಳತಕ್ಕದ್ದು.

a) The residential sital area of BMICP township shall not exceed 55%.
b) A minimum 10% of the total area shall be reserved for parks, playgrounds and open space.
c) A minimum 5% of the total area shall be reserved for civil amenities.
d) The minimum width of road shall be 10 mtrs.

3. ಬೆಂಗಳೂರು ದಕ್ಷಿಣ ತಾಲ್ಲೂಕು ಕೆಂಗೇರಿ ಹೋಬಳಿ, ಕೃಷ್ಣರಾಜಪುರ ಗ್ರಾಮದ ಸ.ನಂ.14, 19 ಮತ್ತು 21ರ ಜಮೀನುಗಳನ್ನು ವಸತಿ ಉಪಯೋಗಕ್ಕಾಗಿ ಕಾಯ್ದಿರಿಸಲಾಗಿದೆ.

ಬೆಂಗಳೂರು-ಮೈಸೂರು ಇನ್‌ಫ್ರಾಸ್ಟ್ರಕ್ಚರ್ ಕಾರಿಡಾರ್ ಏರಿಯಾ ಸ್ಥಳೀಯ ಯೋಜನಾ ಪ್ರದೇಶಕ್ಕೆ ಸ್ಥೂಲಾಭಿವೃದ್ಧಿ ಯೋಜನೆಗೆ ಅಂತಿಮ ಅನುಮೋದನೆ ನೀಡಿದ ಗುರುತಾಗಿ ವರದಿ ಮತ್ತು ಎಲ್ಲಾ ನಕ್ಷೆಗಳ ಮೇಲೆ ಸರ್ಕಾರದ ಮುದ್ರೆಯನ್ನು ಹಾಕಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 329 **ವಿ. ಶ್ರೀಧರಮೂರ್ತಿ**

ಸರ್ಕಾರದ ಅಧೀನ ಕಾರ್ಯದರ್ಶಿ, ನಗರಾಭಿವೃದ್ಧಿ ಇಲಾಖೆ.

## ಕನ್ನಡ ಮತ್ತು ಸಂಸ್ಕೃತಿ ಸಚಿವಾಲಯ

**ವಿಷಯ:** 2003-04ನೇ ಸಾಲಿನಲ್ಲಿ ಶ್ರೀ ಧರ್ಮಸ್ಥಳ ಮಂಜುನಾಥೇಶ್ವರ ಧರ್ಮೋತ್ಥಾನ ಟ್ರಸ್ಟ್‌ನ ಸಹಯೋಗದೊಂದಿಗೆ ರಾಜ್ಯ ಸಂರಕ್ಷಿತ ಸ್ಮಾರಕಗಳ ನಿರ್ವಹಣೆ ಮತ್ತು ಅಭಿವೃದ್ಧಿ

**ಓದಲಾಗಿದೆ:**
1. ಸರ್ಕಾರಿ ಆದೇಶ ಸಂಖ್ಯೆ: ಸಂಕಇ 97 ಕೆಎಂಯು 2001 ದಿ: 19.11.2003
2. ಸರ್ಕಾರಿ ಆದೇಶ ಸಂಖ್ಯೆ: ಸಂಕಇ 80 ಕೆಎಂಯು 2002 ದಿ: 26.8.2002.
3. ನಿರ್ದೇಶಕರು, ಪ್ರಾಚ್ಯವಸ್ತು ಮತ್ತು ಸಂಗ್ರಹಾಲಯ ನಿರ್ದೇಶನಾಲಯ, ಇವರ ಪತ್ರ ಕ್ರಮಾಂಕ ಡಿಎಎಂ:ಎಸಿಟಿ:1:17:2003-04 ದಿ: 22.7.2003.
4. ದಿನಾಂಕ 29.1.2004ರ ಪ್ರಾಚ್ಯವಸ್ತು ಮತ್ತು ಸಂಗ್ರಹಾಲಯ ನಿರ್ದೇಶಕರ ಆ.ಸ.ಪತ್ರ ಸಂಖ್ಯೆ ಡಿಎಎಂ:ಸಂ:ವಿ-2003-2004.

**ಪ್ರಸ್ತಾವನೆ:**

ಮೇಲೆ ಕ್ರಮಸಂಖ್ಯೆ (1)ರಲ್ಲಿ ಓದಲಾದ ಸರ್ಕಾರಿ ಆದೇಶದಲ್ಲಿ ಶ್ರೀ ಧರ್ಮಸ್ಥಳ ಮಂಜುನಾಥೇಶ್ವರ ಧರ್ಮೋತ್ಥಾನ ಟ್ರಸ್ಟ್ ಹಾಗೂ ನಿರ್ದೇಶಕರು, ಪ್ರಾಚ್ಯವಸ್ತು ಮತ್ತು ಸಂಗ್ರಹಾಲಯ ನಿರ್ದೇಶನಾಲಯ ಸಹಯೋಗದೊಂದಿಗೆ ರಾಜ್ಯ ಸಂರಕ್ಷಿತ ಸ್ಮಾರಕಗಳ ಸಂರಕ್ಷಣೆ ಮಾಡಲು ಆದೇಶಿಸಲಾಗಿದೆ. ಕ್ರಮ ಸಂಖ್ಯೆ-2ರಲ್ಲಿ ಓದಲಾದ ಆದೇಶಕ್ಕೆ ಲಗತ್ತಿಸಿರುವ ಅನುಬಂಧ-1ರಲ್ಲಿ ಕೆಲವು ಷರತ್ತು ಮತ್ತು ನಿಬಂಧನೆಗಳನ್ನು ವಿಧಿಸಲಾಗಿದೆ. 2003-04ನೇ ಸಾಲಿನಲ್ಲಿ ಸಂರಕ್ಷಿತ ಸ್ಮಾರಕಗಳನ್ನು ಸಂರಕ್ಷಿಸಲು ಹಾಗೂ ಅಭಿವೃದ್ಧಿಗೊಳಿಸಲು ಮೇಲೆ ಕ್ರಮ ಸಂಖ್ಯೆ (3) ರಲ್ಲಿ ಓದಲಾದ ಪತ್ರದಲ್ಲಿ ಪ್ರಾಚ್ಯವಸ್ತು ಮತ್ತು ಸಂಗ್ರಹಾಲಯ ನಿರ್ದೇಶನಾಲಯದ, ನಿರ್ದೇಶಕರು, ಒಂದು ಪ್ರಸ್ತಾವನೆಯನ್ನು ಸಲ್ಲಿಸಿ ರಾಜ್ಯದ 13 ಜಿಲ್ಲೆಗಳ ವ್ಯಾಪ್ತಿಯಲ್ಲಿ ಬರುವ 18 ಪ್ರಾಚೀನ ಐತಿಹಾಸಿಕ ಸ್ಮಾರಕಗಳ ವಿವರಣೆಗಳನ್ನೊಳಗೊಂಡ ಕ್ರಿಯಾ ಯೋಜನೆಯನ್ನು ತಯಾರಿಸಿ ಸರ್ಕಾರದ ಮಂಜೂರಾತಿ ಪಡೆಯಲು ಹಾಗೂ ಮೇಲ್ಕಂಡ ಕಾಮಗಾರಿಗಳನ್ನು ಕೈಗೊಳ್ಳಲು ಆಡಳಿತಾತ್ಮಕ ಮಂಜೂರಾತಿಯನ್ನು ನೀಡಿ, ಕರ್ನಾಟಕ ಸಾರ್ವಜನಿಕ ಸಂಗ್ರಹಣೆಗಳಲ್ಲಿ ಪಾರದರ್ಶಕತೆ ಅಧಿನಿಯಮ, 1999 ರಡಿಯಲ್ಲಿ ವಿನಾಯಿತಿ ನೀಡಬೇಕೆಂದು ಕೋರಿರುತ್ತಾರೆ.

ಕ್ರಮ ಸಂಖ್ಯೆ 4 ರಲ್ಲಿರುವ ತಮ್ಮ ಪತ್ರದಲ್ಲಿ ಪ್ರಾಚ್ಯವಸ್ತು ಮತ್ತು ಸಂಗ್ರಹಾಲಯದ ನಿರ್ದೇಶಕರು, ಸಾರ್ವಜನಿಕ ಖಾಸಗೀ ಸಹಭಾಗಿತ್ವ ಯೋಜನೆಯಡಿಯಲ್ಲಿ 2002-03ನೇ ಸಾಲಿನಲ್ಲಿ ಗುರುತಿಸಲಾದ 18 ಕಾಮಗಾರಿಗಳ ಪೈಕಿ ಧರ್ಮಸ್ಥಳ ಟ್ರಸ್ಟ್‌ನ ವತಿಯಿಂದ 12 ಸ್ಮಾರಕಗಳ ಕಾಮಗಾರಿಗಳನ್ನು ಕೈಗೆತ್ತಿಕೊಂಡು 8 ಕಾಮಗಾರಿಗಳು ಪೂರ್ಣಗೊಂಡಿದ್ದು, ಇನ್ನು ನಾಲ್ಕು ಕಾಮಗಾರಿಗಳು ಪೂರ್ಣಗೊಳ್ಳುವ ಹಂತದಲ್ಲಿದೆ ಎಂದು ತಿಳಿಸಿ ಮತ್ತು ಈ ಸಾಲಿನಲ್ಲಿ ಬಿಡುಗಡೆ ಮಾಡಿದ ರೂ. 40 ಲಕ್ಷಕ್ಕೆ ಜಂಟಿ ಬಳಕೆ ಪ್ರಮಾಣ ಪತ್ರವನ್ನು ಸಲ್ಲಿಸಿದ್ದಾರೆ.

ಈ ಹಿನ್ನೆಲೆಯಲ್ಲಿ ಪ್ರಸ್ತಾವನೆಯನ್ನು ಪರಿಶೀಲಿಸಿ ಈ ಕೆಳಕಂಡಂತೆ ಆದೇಶಿಸಲಾಗಿದೆ.

**ಸರ್ಕಾರಿ ಆದೇಶ ಸಂಖ್ಯೆ: ಸಂಕಇ 123 ಕೆಎಂಯು 2003, ಬೆಂಗಳೂರು ದಿ: 1ನೇ ಮಾರ್ಚ್ 2004**

ಪ್ರಸ್ತಾವನೆಯಲ್ಲಿ ವಿವರಿಸಿರುವಂತೆ ಪ್ರಾಚ್ಯವಸ್ತು ಮತ್ತು ಸಂಗ್ರಹಾಲಯ ನಿರ್ದೇಶನಾಲಯದ ವತಿಯಿಂದ ರಾಜ್ಯ ಸಂರಕ್ಷಿತ ಸ್ಮಾರಕಗಳ ಸಂರಕ್ಷಣೆ, ನಿರ್ವಹಣೆ ಮತ್ತು ಅಭಿವೃದ್ಧಿಗಾಗಿ ಶ್ರೀ ಧರ್ಮಸ್ಥಳ ಮಂಜುನಾಥೇಶ್ವರ ಧರ್ಮೋತ್ಥಾನ ಟ್ರಸ್ಟ್‌ನ ಸಹಯೋಗದೊಂದಿಗೆ ಕೈಗೊಳ್ಳುವ ಕಾಮಗಾರಿಗಳಿಗೆ ಆದೇಶಕ್ಕೆ ಲಗತ್ತಿಸಲಾದ ಅನುಬಂಧ-1ರಲ್ಲಿ ವಿಧಿಸಲಾದ ಷರತ್ತುಗಳು ಮತ್ತು ನಿಬಂಧನೆಗಳು (ಪ್ರತಿಯನ್ನು ಈ ಆದೇಶದೊಂದಿಗೆ ಲಗತ್ತಿಸಲಾಗಿದೆ) ಹಾಗೂ ಈ ಕೆಳಕಂಡ ಸೂಚನೆಗಳಿಗೆ ಒಳಪಟ್ಟು ಈ ಆದೇಶದ ಅನುಬಂಧ-2ರಲ್ಲಿರುವ 18 ಸ್ಮಾರಕಗಳ ಸಂರಕ್ಷಣೆಯ ಕಾಮಗಾರಿಗಳನ್ನು ತೆಗೆದುಕೊಳ್ಳಲು ಸರ್ಕಾರವು ಆದೇಶಿಸಿದೆ:

(1) ಲೆಕ್ಕ ಪರಿಶೋಧಕರು ತಪಾಸಣೆ ಮಾಡಿದ ಲೆಕ್ಕಪತ್ರಗಳನ್ನು ಕೂಡಲೇ ಸಲ್ಲಿಸತಕ್ಕದ್ದು,

(2) ತುರ್ತು ಸಂರಕ್ಷಣೆಯ ಅಗತ್ಯವಿರುವ (priority basis) ಸ್ಮಾರಕಗಳನ್ನು ಮೊದಲು ಆಯ್ದುಕೊಳ್ಳುವುದು;

(3) ಪೂಜೆಗೊಳ್ಳುತ್ತಿರುವ ಸ್ಮಾರಕಗಳ ಸಂರಕ್ಷಣೆಗೆ ಧಾರ್ಮಿಕ ದತ್ತಿ ಇಲಾಖೆಯ ಸಹಯೋಗ ಪಡೆದುಕೊಳ್ಳುವುದು;

(4) ಹಂತ ಹಂತವಾಗಿ ಕೆಲವು ಸ್ಮಾರಕಗಳ ಸಂರಕ್ಷಣೆಗೆ ಕೇಂದ್ರ ಸರ್ಕಾರದ ಅನುದಾನ ಪಡೆದುಕೊಳ್ಳಲು ಪ್ರಯತ್ನಿಸುವುದು.

ಈ ಆದೇಶವನ್ನು ಆರ್ಥಿಕ ಇಲಾಖೆಯ ಟಿಪ್ಪಣಿ ಸಂಖ್ಯೆ: ಆಇ 1837 ವೆಚ್ಚ–5:03 ದಿನಾಂಕ 8.12.2003ರಲ್ಲಿ ನೀಡಿರುವ ಸಹಮತಿಯೊಂದಿಗೆ ಹಾಗೂ ಅಧಿಸೂಚನೆ ಸಂಖ್ಯೆ: ಪಿಡಬ್ಲ್ಯೂಡಿ 654 ಎಫ್‌ಸಿ–3/2003 ದಿನಾಂಕ 29.11.2003 ಕರ್ನಾಟಕ ಸಾರ್ವಜನಿಕ ಸಂಗ್ರಹಣೆಗಳಲ್ಲಿ ಪಾರದರ್ಶಕತೆ ಅಧಿನಿಯಮ, 1999 ರಡಿಯಲ್ಲಿ ನೀಡಿದ ವಿನಾಯಿತಿಯನ್ವಯ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

**ಎಸ್.ವಿಶಾಲಾಕ್ಷಮ್ಮ**

ಸರ್ಕಾರದ ಅಧೀನ ಕಾರ್ಯದರ್ಶಿ, ಕನ್ನಡ ಮತ್ತು ಸಂಸ್ಕೃತಿ ಇಲಾಖೆ.

**ಸರ್ಕಾರಿ ಆದೇಶ ಸಂಖ್ಯೆ:ಸಂಕಇ 123 ಕೆಎಂಯು 2003 ದಿನಾಂಕ.1.3.2004ಕ್ಕೆ ಅನುಬಂಧ–1**

1) ಸಂರಕ್ಷಣೆಗೆ ತೆಗೆದುಕೊಳ್ಳಲಾದ ಸ್ಮಾರಕವು 'ಕರ್ನಾಟಕ ಪ್ರಾಚೀನ ಮತ್ತು ಐತಿಹಾಸಿಕ ಸ್ಮಾರಕಗಳು ಹಾಗೂ ಪ್ರಾಚ್ಯ ನಿವೇಶಗಳ ಮತ್ತು ಅವಶೇಷಗಳ ಅಧಿನಿಯಮ 1961' ರ ಕಲಂ 2ರಲ್ಲಿ ಕಾಣಿಸಿದ ವ್ಯಾಖ್ಯಾನಕ್ಕೆ ಒಳಪಟ್ಟಿರತಕ್ಕದ್ದು.

2) ಸಹಯೋಗದೊಂದಿಗೆ ಸ್ಮಾರಕಗಳ ಸಂರಕ್ಷಣಾ ಕಾರ್ಯ ತೆಗೆದುಕೊಳ್ಳುವುದಕ್ಕೆ ಮುಂಚೆ ವಿವರವಾದ ಅಂದಾಜು ಪಟ್ಟಿಯನ್ನು ಧರ್ಮಸ್ಥಳ ಧರ್ಮೋತ್ಥಾನ ಟ್ರಸ್ಟ್ ಹಾಗೂ ಪ್ರಾಚ್ಯವಸ್ತು ಮತ್ತು ಸಂಗ್ರಹಾಲಯ ನಿರ್ದೇಶನಾಲಯದ ಅಧಿಕಾರಿಗಳು ಜಂಟಿಯಾಗಿ ತಯಾರಿಸುವುದು. ಸಂರಕ್ಷಣೆಗೆ ತಗಲುವ ಖರ್ಚಿನಲ್ಲಿ ಶೇ.40 ಭಾಗವನ್ನು ಸರ್ಕಾರ, ಶೇ.40 ಭಾಗವನ್ನು ಧರ್ಮಸ್ಥಾನ ಟ್ರಸ್ಟ್ ನವರು ಹಾಗೂ ಶೇ.20 ಭಾಗವನ್ನು ಸ್ಥಳೀಯ ಸಾರ್ವಜನಿಕರು ಸೇರಿ ಭರಿಸುವರು.

3) ಪ್ರತೀ ಸ್ಮಾರಕದ ಸಂರಕ್ಷಣೆಗೆ ಸರ್ಕಾರವು ನೀಡುವ ಅನುದಾನವು (ತಗಲುವ ಒಟ್ಟು ವೆಚ್ಚದ ಪ್ರತಿಶತ 40 ಭಾಗ) ರೂ.5.00ಲಕ್ಷಕ್ಕಿಂತ ಮೀರಕೂಡದು. ಒಂದು ವೇಳೆ ವೆಚ್ಚವು ಅಂದಾಜಿಗಿಂತ ಹೆಚ್ಚಿಗೆ ಆದರೆ ಅಂತಹ ವೆಚ್ಚವನ್ನು ಸ್ಥಳೀಯರಿಂದ ಸಂಗ್ರಹಿಸುವುದು.

4) ಪ್ರತಿ ತಿಂಗಳು ಕಾಮಗಾರಿಗಳ ಭೌತಿಕ ಹಾಗೂ ಆರ್ಥಿಕ ಪ್ರಗತಿಯನ್ನು ಪ್ರಾಚ್ಯವಸ್ತು ಮತ್ತು ಸಂಗ್ರಹಾಲಯ ನಿರ್ದೇಶನಾಲಯದ ನಿರ್ದೇಶಕರಿಗೆ, ಆಯಾಯ ಜಿಲ್ಲಾಧಿಕಾರಿಗಳಿಗೆ ಹಾಗೂ ಸರ್ಕಾರಕ್ಕೆ ಕಳುಹಿಸಿಕೊಡುವುದು.

5) ಪ್ರತಿ ಕಾಮಗಾರಿಯ ಸ್ಥಳದಲ್ಲಿ ಒಂದು ಫಲಕವನ್ನು ಅಳವಡಿಸಿ ಆ ಫಲಕದಲ್ಲಿ ಕಾಮಗಾರಿಯ ಹೆಸರು, ಕಾಮಗಾರಿಯನ್ನು ಕೈಗೊಂಡಿರುವ ಸಂಸ್ಥೆಯ ಹೆಸರು, ಕಾಮಗಾರಿಗೆ ತಗಲುವ ವೆಚ್ಚ, ಕಾಮಗಾರಿಯು ಆರಂಭವಾದ ದಿನಾಂಕ ಹಾಗೂ ಕಾಮಗಾರಿ ಮುಗಿಯುವ ದಿನಾಂಕ ಮುಂತಾದವುಗಳ ವಿವರಗಳನ್ನು ಫಲಕದಲ್ಲಿ ನಮೂದಿಸುವುದು.

6) ಸದರಿ ಕಾಮಗಾರಿಗಳಿಗೆ ಸಂಬಂಧಿಸಿದಂತೆ ಪ್ರತ್ಯೇಕ ಲೆಕ್ಕಪತ್ರವನ್ನು ಟ್ರಸ್ಟ್‌ನವರು ಇಡತಕ್ಕದ್ದು ಹಾಗೂ ಮಹಾಲೇಖಪಾಲರು, ಸಂಬಂಧಿಸಿದ ಸರ್ಕಾರಿ ಅಧಿಕಾರಿಗಳು ಅಂತಹ ಲೆಕ್ಕಪತ್ರಗಳನ್ನು ಪರಿಶೀಲಿಸಲು ಅಧಿಕಾರ ಹೊಂದಿರುತ್ತಾರೆ.

7) ಈ ಅನುದಾನವನ್ನು ಉಪಯೋಗಿಸಿಕೊಳ್ಳುವುದಕ್ಕೆ ಸಂಬಂಧಿಸಿದಂತೆ ಪ್ರಾಚ್ಯವಸ್ತು ಮತ್ತು ಸಂಗ್ರಹಾಲಯ ನಿರ್ದೇಶನಾಲಯದ ನಿರ್ದೇಶಕರು ಹಾಗೂ ಟ್ರಸ್ಟಿನ ನಿರ್ದೇಶಕರು ಜಂಟಿಯಾಗಿ ಒಂದು ಬಳಕೆ ಪ್ರಮಾಣಪತ್ರವನ್ನು ಸರ್ಕಾರಕ್ಕೆ ಸಲ್ಲಿಸುವುದು. ತದನಂತರವೇ ಮುಂದಿನ ವರ್ಷದ ಕ್ರಿಯಾ ಯೋಜನೆಯನ್ನು ಸಮಿತಿಗೆ ಒಪ್ಪಿಗೆಗೆ ಮಂಡಿಸುವುದು. ಜೊತೆಗೆ ಕ್ರಿಯಾ ಯೋಜನೆಯ ಅನುಷ್ಠಾನ ವರದಿಯನ್ನು ಸಹ ಸಮಿತಿಗೆ ಮಂಡಿಸುವುದು.

8) ಸಂರಕ್ಷಣಾ ಕಾರ್ಯ ಕೈಗೊಳ್ಳುವಾಗ ಸಂರಕ್ಷಣೆಗೆ ಸಂಬಂಧಿಸಿದಂತೆ ಯಾವುದೇ ಸಮಸ್ಯೆ ಬಂದರೆ ಅಂತಹ ಸಮಸ್ಯೆಯನ್ನು ಉನ್ನತ ಮಟ್ಟದ ಸಮಿತಿಯ ಅವಗಾಹನೆಗೆ ತಂದು ಪರಿಹಾರ ಪಡೆದುಕೊಳ್ಳುವುದು.

9) ಸಂರಕ್ಷಣಾ ಕಾಮಗಾರಿಗೆ ಸಂಬಂಧಿಸಿದಂತೆ ಒಟ್ಟು ವೆಚ್ಚದ ಶೇ.20 ಭಾಗವನ್ನು ಸಾರ್ವಜನಿಕರಿಂದ ಸಂಗ್ರಹಿಸಿ ಅಂತಹ ಹಣವನ್ನು ಟ್ರಸ್ಟ್‌ನ ಖಾತೆಗೆ ಜಮಾ ಮಾಡಿ ಕಾಮಗಾರಿ ಕೈಕೊಳ್ಳುವ ಸಂದರ್ಭದಲ್ಲಿ ಉಪಯೋಗಿಸಿಕೊಳ್ಳುವುದು. ಈ ವಂತಿಗೆ ನಗದು ಅಥವಾ ಸಾಮಗ್ರಿಗಳು ಅಥವಾ ಕಾರ್ಮಿಕ ರೂಪದಲ್ಲಿ ಸಂಪೂರ್ಣವಾಗಿ ಅಥವಾ ಭಾಗಶ:ವಾಗಿಯಾಗಲಿ ಇರಬಹುದು.

10) ಕಾಮಗಾರಿ ಪ್ರಗತಿ ಹಂತದಲ್ಲಿರುವಾಗ ಪ್ರಾಚ್ಯವಸ್ತು ಮತ್ತು ಸಂಗ್ರಹಾಲಯ ನಿರ್ದೇಶನಾಲಯದ ನಿರ್ದೇಶಕರು, ಇಂಜಿನಿಯರ್ಸ್ ಹಾಗೂ ಇಲಾಖೆಯ ಇತರೆ ಅಧಿಕಾರಿಗಳು ಕಾಮಗಾರಿಯನ್ನು ಪರಿವೀಕ್ಷಿಸಿ ಅದಕ್ಕೆ ಸಂಬಂಧಿಸಿದ ವರದಿಯನ್ನು ಸರ್ಕಾರಕ್ಕೆ ಸಲ್ಲಿಸುವುದು.

11) ಲೆಕ್ಕ ಪರಿಶೋಧಕರಿಂದ ತಪಾಸಣೆ ಮಾಡಿದ ಲೆಕ್ಕಪತ್ರವನ್ನು ಟ್ರಸ್ಟ್‌ನವರು ಹೊಸ ಕ್ರಿಯಾಯೋಜನೆ ಮಂಡಿಸುವುದಕ್ಕಿಂತ ಮುಂಚೆ ಸರ್ಕಾರಕ್ಕೆ ಮಂಡಿಸುವುದು.

12) ಸ್ಮಾರಕದ ಸಂರಕ್ಷಣೆಗೆ ಸಂಬಂಧಿಸಿದಂತೆ ಮುಂಚೆ, ಸಂರಕ್ಷಣೆ ನಡೆಯುವಾಗ, ಸಂರಕ್ಷಣೆ ಮುಗಿದ ನಂತರ ಛಾಯಾಚಿತ್ರಗಳನ್ನು ತೆಗೆಸುವುದು ಹಾಗೂ ವಿಡಿಯೋಗ್ರಫಿ ಮಾಡಿಸುವುದು. ಇವುಗಳು ಸ್ಮಾರಕಗಳ ಸಂರಕ್ಷಣೆಗೆ ಸಂಬಂಧಿಸಿದಂತೆ ಮುಖ್ಯವಾದ ದಾಖಲೆಗಳಾಗುತ್ತವೆ.

13) ಸ್ಮಾರಕಗಳ ಸಂರಕ್ಷಣೆ ನಂತರ ಸದರಿ ಸ್ಮಾರಕದ ನಿರ್ವಹಣೆ ಮತ್ತು ಉಸ್ತುವಾರಿ ನೋಡಿಕೊಳ್ಳಲು ಸ್ಥಳೀಯ ಸಮಿತಿಯನ್ನು ರಚಿಸಿ ಅಂತಹ ಸಮಿತಿಯ ಸುಪರ್ದಿಗೆ ಸ್ಮಾರಕವನ್ನು ವಹಿಸುವುದು. (ಸರ್ಕಾರಿ ಆದೇಶ ಸಂಖ್ಯೆ: ಸಂಕಇ 97 ಕೆಎಂಯು 2001 ದಿನಾಂಕ 19.11.2001)

**ಎಸ್.ವಿಶಾಲಾಕ್ಷಮ್ಮ**

ಸರ್ಕಾರದ ಅಧೀನ ಕಾರ್ಯದರ್ಶಿ, ಕನ್ನಡ ಮತ್ತು ಸಂಸ್ಕೃತಿ ಇಲಾಖೆ.

**ಸರ್ಕಾರಿ ಆದೇಶ ಸಂಖ್ಯೆ ಸಂಕಇ 123 ಕೆಎಂಯು 2003 ದಿನಾಂಕ:1.3..2004ಕ್ಕೆ**

**ಅನುಬಂಧ–2**

1] ಶ್ರೀ ಕಾಶಿವಿಶ್ವೇಶ್ವರ ದೇವಸ್ಥಾನ, ಸೊಂಡೇಕೊಪ್ಪ(ಬೆಂಗಳೂರು ಗ್ರಾಮಾಂತರ)
2] ಶ್ರೀ ತ್ರಿಯಾಂಬಕೇಶ್ವರ ದೇವಾಲಯ, ತ್ರಿಯಾಂಬಕಪುರ (ಚಾಮರಾಜನಗರ ಜಿಲ್ಲೆ)
3] ಶ್ರೀ ರಂಗನಾಥಸ್ವಾಮಿ ದೇವಸ್ಥಾನ, ಉಮ್ಮತ್ತೂರು (ಚಾಮರಾಜನಗರ ಜಿಲ್ಲೆ)
4) ಶ್ರೀ ನೇಮಿನಾಥ ಸ್ವಾಮಿ ಬಸದಿ, ನೇಮನ ಹಳ್ಳಿ(ಚಿಕ್ಕಮಗಳೂರು ಜಿಲ್ಲೆ)
5] ಶ್ರೀ ಈಶ್ವರ ದೇವಸ್ಥಾನ, ದುಮ್ಮಿ (ಚಿತ್ರದುರ್ಗ ಜಿಲ್ಲೆ)
6] ಶ್ರೀ ಶಾಂತಿನಾಥ ಸ್ವಾಮಿ ಬಸದಿ, ಬೈಪಾಡಿ (ದಕ್ಷಿಣ ಕನ್ನಡ ಜಿಲ್ಲೆ)
7] ಶ್ರೀ ಭವಾನಿ ಶಂಕರ ದೇವಸ್ಥಾನ, ಹಳೇ ಹುಬ್ಬಳ್ಳಿ (ಧಾರವಾಡ ಜಿಲ್ಲೆ)
8] ಶ್ರೀ ಪಾರ್ಶ್ವನಾಥ ದಿಗಂಬರ ಜೈನಮಂದಿರ, ಹರಸೂರು (ಗುಲ್ಬರ್ಗ ಜಿಲ್ಲೆ)
9] ಶ್ರೀ ಕಲ್ಲೇಶ್ವರ ದೇವಾಲಯ, ಹಿರೇಮಾಗನೂರು (ಹಾವೇರಿ ಜಿಲ್ಲೆ)
10] ಶ್ರೀ ಬಸವೇಶ್ವರ ದೇವಸ್ಥಾನ, ಕಲ್ಕೇರಿ (ಹಾವೇರಿ ಜಿಲ್ಲೆ)
11] ಶ್ರೀ ದಿಗಂಬರ ಜೈನ ಸಹಸ್ರಕೂಟ ದೇವಾಲಯ, ಅರಸಿಕೆರೆ (ಹಾಸನ ಜಿಲ್ಲೆ)
12] ಶ್ರೀ ಮಲ್ಲೇಶ್ವರ ಸ್ವಾಮಿ ದೇವಾಲಯ, ಸಂಕೇಶಿವಾರ (ಹಾಸನ ಜಿಲ್ಲೆ)
13] ಶ್ರೀ ಮಿನಾಕ್ಷಿ ಸೋಮಸುಂದರೇಶ್ವರ ದೇವಸ್ಥಾನ, ನಾರಮದ್ದೆಪಲ್ಲಿ (ಕೋಲಾರ ಜಿಲ್ಲೆ)
14] ಶ್ರೀ ಕಾಶಿವಿಶ್ವೇಶ್ವರ ದೇವಾಲಯ, ಹೊಸಬುದನೂರು (ಮಂಡ್ಯ ಜಿಲ್ಲೆ)
15] ಶ್ರೀ ಗುಂಜನರಸಿಂಹಸ್ವಾಮಿ ದೇವಸ್ಥಾನ, ಟಿ.ನರಸೀಪುರ (ಮೈಸೂರು ಜಿಲ್ಲೆ)
16] ಶ್ರೀ ಈಶ್ವರ ದೇವಸ್ಥಾನ, ಹರದೂರು (ಮೈಸೂರು ಜಿಲ್ಲೆ)
17] ಶ್ರೀ ಆದಿನಾಥಸ್ವಾಮಿ ಬಸದಿ, ಅನಿವಾಳ (ಮೈಸೂರು ಜಿಲ್ಲೆ)
18] ಶ್ರೀ ಚಂದ್ರಮೌಳೇಶ್ವರ ಸ್ವಾಮಿ ದೇವಸ್ಥಾನ, ತಿರುಮಲಾಪುರ (ತುಮಕೂರು ಜಿಲ್ಲೆ)

**ಎಸ್.ವಿಶಾಲಾಕ್ಷಮ್ಮ**

ಪಿ.ಆರ್. 330 ಸರ್ಕಾರದ ಅಧೀನ ಕಾರ್ಯದರ್ಶಿ, ಕನ್ನಡ ಮತ್ತು ಸಂಸ್ಕೃತಿ ಇಲಾಖೆ.

**ಶಿಕ್ಷಣ ಸಚಿವಾಲಯ**

**ತಿದ್ದುಪಡಿ**

**ಸಂಖ್ಯೆ: ಇಡಿ 287 ಯುಪಿಸಿ 2003, ಬೆಂಗಳೂರು, ದಿನಾಂಕ: 8ನೇ ಮಾರ್ಚ್ 2004**

ಸರ್ಕಾರಿ ಸುತ್ತೋಲೆ ಸಂಖ್ಯೆ:ಇಡಿ 196 ಯುಪಿಸಿ 2000 (ಭಾಗ), ದಿನಾಂಕ:22-1-2003ರ ಕಂಡಿಕೆ 4ರ ಬದಲಾಗಿ ಈ ಕೆಳಕಂಡಂತೆ ಓದಿಕೊಳ್ಳತಕ್ಕದ್ದು.

"ಹಾಲಿ ಉಪನ್ಯಾಸಕರು ಕರ್ತವ್ಯನಿರ್ವಹಿಸುತ್ತಿರುವ ಅನುದಾನಿತ ಹುದ್ದೆಗಳು ಹೆಚ್ಚುವರಿ ಆಗಿವೆಯೆಂದು ಕಂಡುಬಂದಲ್ಲಿ ಅಂತಹ ಉಪನ್ಯಾಸಕರನ್ನು ಅಗತ್ಯ ಕಾರ್ಯಭಾರ ಇರುವ ಆಡಳಿತ ಮಂಡಳಿಯ ವ್ಯಾಪ್ತಿಯಲ್ಲಿನ ಇತರೆ ಕಾಲೇಜುಗಳಲ್ಲಿ ಮಂಜೂರಾದ ಅನುದಾನಿತ ಕಾರ್ಯಭಾರ ಇರುವ ಖಾಲಿ ಹುದ್ದೆಗಳು ಲಭ್ಯವಿದ್ದಲ್ಲಿ ಅಂತಹ ಹುದ್ದೆಗಳ ಎದುರಾಗಿ ಸಕ್ಷಮ ಪ್ರಾಧಿಕಾರ ಮರು ಹಂಚಿಕೆ ಮಾಡತಕ್ಕದ್ದು. ಎಲ್ಲಿ ಕಾರ್ಯಭಾರವಿಲ್ಲವೊ ಅಂತಹ ಉಪನ್ಯಾಸಕರನ್ನು ಮಂಜೂರಾದ ಖಾಲಿ ಹುದ್ದೆ ಲಭ್ಯವಿದ್ದು, ಅಗತ್ಯ ಕಾರ್ಯಭಾರವಿರುವ ಅನುದಾನಿತ ಕಾಲೇಜಿಗೆ ಎರಡೂ ಆಡಳಿತ ಮಂಡಳಿಗಳ ಪರಸ್ಪರ ಒಪ್ಪಿಗೆ ಮೇರೆಗೆ ನಿಯೋಜನೆ ಮಾಡಲು ಕ್ರಮ ಜರುಗಿಸತಕ್ಕದ್ದು. ಅಂತಹ ನಿಯೋಜನೆ ಸಾಧ್ಯವಾಗದಿದ್ದಲ್ಲಿ, ಕಾಲೇಜಿನ ಅಗತ್ಯ ಕಾರ್ಯಭಾರ ಉಂಟಾಗುವವರೆಗೆ, ಆ ಹುದ್ದೆಗೆ ನೀಡುತ್ತಿದ್ದ ಅನುದಾನವನ್ನು ಬಿಡುಗಡೆ ಮಾಡತಕ್ಕದ್ದಲ್ಲ".

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 331 **ಮೇರಿ ಜಾಯ್ಸ್**

ಸರ್ಕಾರದ ಉಪ ಕಾರ್ಯದರ್ಶಿ-4, ಶಿಕ್ಷಣ ಇಲಾಖೆ.

**ವಿಷಯ:** ಕುವೆಂಪು ವಿಶ್ವವಿದ್ಯಾಲಯದ ಘಟಕ ಕಾಲೇಜುಗಳಾದ ಸಹ್ಯಾದ್ರಿ ಕಲಾ ಮತ್ತು ವಾಣಿಜ್ಯ ಕಾಲೇಜು ಹಾಗೂ ಸಹ್ಯಾದ್ರಿ ವಿಜ್ಞಾನ ಕಾಲೇಜಿನಲ್ಲಿ ಸೇವೆ ಸಲ್ಲಿಸುತ್ತಿರುವ ತಾತ್ಕಾಲಿಕ ಉಪನ್ಯಾಸಕರ ವಿಲೀನಿಕರಣ.

**ಓದಲಾಗಿದೆ:** (೧) ಅಧಿಸೂಚನೆ ಸಂಖ್ಯೆ: ಡಿಪಿಎಆರ್ ೪೮ ಎಸ್‌ಆರ್‌ಇ ೯೬ ದಿನಾಂಕ:೨೨-೧೦-೧೯೯೭

(೨) ಅಧಿಸೂಚನೆ ಸಂಖ್ಯೆ: ಡಿಪಿಎಆರ್ ೫೫ ಎಸ್‌ಆರ್‌ಇ ೨೦೦೦ ದಿನಾಂಕ:೦೯-೦೭-೨೦೦೨.

(೩) ದಿನಾಂಕ: ೦೧-೧೦-೨೦೦೩ ಸಂಖ್ಯೆ: ಕೆಯು/ಆರ್‌ಇಜಿ/ಇಎಸ್‌ಟಿ/ ೨೦೦೩/೪೩೨೭ರ ಕುವೆಂಪು ವಿಶ್ವವಿದ್ಯಾಲಯದ ಕುಲಸಚಿವರ ಪತ್ರ.

(೪) ಸರ್ಕಾರಿ ಆದೇಶ ಸಂಖ್ಯೆ: ಇಡಿ ೬೯ ಯುಎಸ್‌ವಿ ೨೦೦೩ ದಿನಾಂಕ: ೦೨-೧೨-೨೦೦೩

(೫) ದಿನಾಂಕ: ೨೨-೧೧-೨೦೦೩ ಸಂಖ್ಯೆ: ಕೆಯು/ಆರ್‌ಇಜಿ/ಇಎಸ್‌ಟಿ/ ೨೦೦೩/೧೩೧೮ ಕುವೆಂಪು ವಿಶ್ವವಿದ್ಯಾಲಯದ ಕುಲಸಚಿವರ ಪತ್ರ.

(೬) ದಿನಾಂಕ: ೦೫-೦೧-೨೦೦೪ ಸಂಖ್ಯೆ: ಕೆಯು/ಆರ್‌ಇಜಿ/ ಇಎಸ್‌ಟಿ/ ೨೦೦೩/೬೭೭೬೮ ಕುವೆಂಪು ವಿಶ್ವವಿದ್ಯಾಲಯದ ಕುಲಸಚಿವರ ಪತ್ರ.

**ಪೀಠಿಕೆ**

೧) ಈ ಹಿಂದೆ ಕುವೆಂಪು ವಿಶ್ವವಿದ್ಯಾಲಯ, ಸಹ್ಯಾದ್ರಿ ಕಲಾ ಮತ್ತು ವಾಣಿಜ್ಯ ಕಾಲೇಜು ಮತ್ತು ಸಹ್ಯಾದ್ರಿ ವಿಜ್ಞಾನ ಕಾಲೇಜು ಶಿವಮೊಗ್ಗ ಇಲ್ಲಿ ಸೇವೆ ಸಲ್ಲಿಸುತ್ತಿರುವ ೨೦ ತಾತ್ಕಾಲಿಕ ಉಪನ್ಯಾಸಕರುಗಳನ್ನು ಕಾಲಕಾಲಕ್ಕೆ ತಿದ್ದುಪಡಿಯಾದ ಕರ್ನಾಟಕ ರಾಜ್ಯ ಸಿವಿಲ್ ಸೇವೆಗಳು (ಕರ್ನಾಟಕ ಶಿಕ್ಷಣ ಇಲಾಖೆ ಸೇವೆಗಳಲ್ಲಿ ಅರೆಕಾಲಿಕ ಉಪನ್ಯಾಸಕನಾಗಿ ಕಾರ್ಯ ನಿರ್ವಹಿಸುತ್ತಿರುವ ವ್ಯಕ್ತಿಗಳ ವಿಲೀನ ಗೊಳಿಸುವಿಕೆ (ಕಾಲೇಜು ಶಿಕ್ಷಣ ಇಲಾಖೆ) (ವಿಶೇಷ) ನಿಯಮಗಳು ೧೯೯೬ರನ್ವಯ ವಿಲೀನಿಕರಣಕ್ಕಾಗಿ ಪ್ರಸ್ತಾವನೆ ಸಲ್ಲಿಸಿತ್ತು. ಈ ಪ್ರಸ್ತಾವನೆಯನ್ನು ಮೇಲ್ಕಂಡ ನಿಯಮಗಳನ್ವಯ ಅಭ್ಯರ್ಥಿಗಳ ಅರ್ಹತೆ, ರಿಕ್ತ ಸ್ಥಾನಗಳ ಲಭ್ಯತೆ ಮತ್ತು ಕಾರ್ಯಭಾರ, ಎಸ್‌ಸಿ/ಎಸ್‌ಟಿಗೆ ಮೀಸಲಾದ ರಿಕ್ತ ಸ್ಥಾನಗಳ ಬಳಕೆ ಇತ್ಯಾದಿ ಅಂಶಗಳನ್ನು ಗಮನದಲ್ಲಿಟ್ಟುಕೊಂಡು ಪರಿಶೀಲಿಸಲಾಗಿತ್ತು. ಎಸ್‌ಸಿ/ಎಸ್‌ಟಿಗಳಿಗೆ ಮೀಸಲಾದ ರಿಕ್ತ ಸ್ಥಾನಗಳನ್ನು ಬಳಕೆ ಮಾಡಲು ಇರುವ ನಿರ್ಬಂಧವನ್ನು ಗಮನದಲ್ಲಿಟ್ಟುಕೊಂಡು ನಿಯಮಗಳನ್ವಯ ಅನರ್ಹರೆಂಬ ಕಾರಣದ ಮೇಲೆ ಪ್ರಾಣಿಶಾಸ್ತ್ರ ಉಪನ್ಯಾಸಕರಾದ ಶ್ರೀ ಟಿ.ಆರ್. ಪ್ರಭಾಕರ್‌ರವರು ಸೇರಿದಂತೆ ಕುವೆಂಪು ವಿಶ್ವವಿದ್ಯಾಲಯ ಶಿಫಾರಸ್ಸು ಮಾಡಿದ್ದ ೫ ಅಭ್ಯರ್ಥಿಗಳನ್ನು ಕೈಬಿಟ್ಟು ೧೫ ತಾತ್ಕಾಲಿಕ ಉಪನ್ಯಾಸಕರನ್ನು ಮಾತ್ರ ವಿಲೀನಿಕರಣ ಗೊಳಿಸಲು ನಿರ್ಣಯಿಸಲಾಯಿತು. ಅದರಂತೆ ಮೇಲ್ಕಂಡ ನಿಯಮಗಳ ವ್ಯಾಪ್ತಿಯಲ್ಲಿ ಬರುವ ಮತ್ತು ಕುವೆಂಪು ವಿಶ್ವವಿದ್ಯಾಲಯದ ಘಟಕ ಕಾಲೇಜುಗಳಾದ ಸಹ್ಯಾದ್ರಿ ಕಲಾ ಮತ್ತು ವಾಣಿಜ್ಯ ಹಾಗೂ ಸಹ್ಯಾದ್ರಿ ವಿಜ್ಞಾನ ಕಾಲೇಜು ಶಿವಮೊಗ್ಗ ಇಲ್ಲಿ ಸೇವೆ ಸಲ್ಲಿಸುತ್ತಿರುವ ೧೫ ಜನ ತಾತ್ಕಾಲಿಕ ಉಪನ್ಯಾಸಕರನ್ನು ವಿಲೀನಗೊಳಿಸಲು ಸರ್ಕಾರದ ಮಂಜೂರಾತಿ ನೀಡಿ ದಿನಾಂಕ: ೦೨-೦೨-೨೦೦೩ ಸಂಖ್ಯೆ: ಇಡಿ ೬೯ ಯುಎಸ್‌ವಿ ೨೦೦೩ರಲ್ಲಿ ಆದೇಶ ಹೊರಡಿಸಲಾಗಿದೆ.

೨) ಈ ಪ್ರಸ್ತಾವನೆ ಬಾಕಿ ಇರುವಾಗ ಕುವೆಂಪು ವಿಶ್ವವಿದ್ಯಾಲಯದ ಕುಲಸಚಿವರು ಹಿಂದೆ ಸಲ್ಲಿಸಿದ್ದ ಪ್ರಸ್ತಾವನೆಗಳಿಗೆ ಸಂಬಂಧಿಸಿದಂತೆ ಕೆಲವು ಅಂಶಗಳ ಬಗ್ಗೆ ಸ್ಪಷ್ಟೀಕರಣ ನೀಡಿ ಮತ್ತೊಂದು ಪ್ರಸ್ತಾವನೆ ಸಲ್ಲಿಸಿದ್ದು ಅವು ಈ ಕೆಳಕಂಡಂತಿವೆ:-

೧) ದಿನಾಂಕ: ೨೨-೦೭-೧೯೯೪ ಸಂಖ್ಯೆ ಡಿಪಿಎಆರ್ ೩೫ ಎಸ್‌ಹೆಚ್‌ಎಂ ೧೯೯೪ರ ಸರ್ಕಾರಿ ಆದೇಶದಲ್ಲಿ ಉರ್ದು, ಅರೇಬಿಕ್ ಮತ್ತು ಸಂಸ್ಕೃತ ವಿಷಯಗಳಿಗೆ ಸಂಬಂಧಿಸಿದಂತೆ ಎಸ್‌ಸಿ/ಎಸ್‌ಟಿ ಅಭ್ಯರ್ಥಿಗಳು ಲಭ್ಯವಿಲ್ಲದಿದ್ದಲ್ಲಿ ಅಂತಹ ಹುದ್ದೆ ಗಳನ್ನು ಸಾಮಾನ್ಯ ಪ್ರವರ್ಗದ ಅಭ್ಯರ್ಥಿಗಳಿಂದ ಭರ್ತಿ ಮಾಡಬಹುದಾಗಿರುವುದರಿಂದ ಸಂಸ್ಕೃತ ವಿಷಯಕ್ಕೆ ಸಂಬಂಧಿಸಿದಂತೆ ಬ್ಯಾಕ್‌ಲಾಗ್ ಹುದ್ದೆ ಗುರುತಿಸುವುದರಲ್ಲಿ ವಿಶ್ವವಿದ್ಯಾಲಯ ತಪ್ಪು ಮಾಡಿದೆ. ಸಂಸ್ಕೃತ ವಿಭಾಗದಲ್ಲಿ ಯಾವುದೇ ಎಸ್‌ಸಿ ಅಭ್ಯರ್ಥಿ ಲಭ್ಯವಿಲ್ಲದಿರುವುದರಿಂದ ಇದು ಬ್ಯಾಕ್‌ಲಾಗ್‌ಗೆ ಹೊಂದಿಕೊಂಡಿಲ್ಲವಾದ್ದರಿಂದ ಶ್ರೀಮತಿ ಸುಮಿತ್ರ ವಿ. ಭಟ್ ರವರನ್ನು ವಿಲೀನಗೊಳಿಸಬಹುದಾಗಿದೆ.

೨) ಪ್ರಾಣಶಾಸ್ತ್ರ ಹಾಗೂ ರೇಷ್ಮೆ ಕೃಷಿಶಾಸ್ತ್ರ ಹಾಗೂ ರಸಾಯನಶಾಸ್ತ್ರ ವಿಭಾಗಗಳಲ್ಲಿ ಸಹ ಒಬ್ಬ ತಾತ್ಕಾಲಿಕ ಉಪನ್ಯಾಸಕರನ್ನು ವಿಲೀನಗೊಳಿಸಿದಲ್ಲಿ ಮುಂದಿನ ರಿಕ್ತ ಸ್ಥಾನಗಳು ಎಸ್‌ಟಿ ಪ್ರವರ್ಗಕ್ಕೆ ಮೀಸಲಾಗಿರುವುದರಿಂದ ಅವು ಬ್ಯಾಕ್‌ಲಾಗ್ ಹುದ್ದೆಗಳಾಗುತ್ತವೆ. ಆದ್ದರಿಂದ ಈ ಎರಡು ಹುದ್ದೆಗಳನ್ನು ಬ್ಯಾಕ್‌ಲಾಗ್ ಎಂದು ಭರ್ತಿ ಮಾಡಲು ಸರ್ಕಾರದ ಅನುಮತಿಯನ್ನು ಕೋರಲಾಗಿದೆ.

೩) ಕನ್ನಡ ವಿಭಾಗದಲ್ಲಿ ಎರಡು ರಿಕ್ತ ಸ್ಥಾನಗಳಿದ್ದು, ನಾಲ್ಕು ಉಪನ್ಯಾಸಕರುಗಳಿಗೆ ಕಾರ್ಯಭಾರ ಲಭ್ಯವಿದೆ. ಆದ್ದರಿಂದ ಸರ್ಕಾರವು ಶ್ರೀಮತಿ ಡೈಸಿ ಜಾಸ್ಮಿನ್ ಜಾರ್ಜ್ ರವರನ್ನು ವಿಲೀನಿಕರಣಗೊಳಿಸಲು ನಿರ್ಣಯಿಸಿದ್ದಲ್ಲಿ ಎಸ್‌ಸಿ ಪ್ರವರ್ಗದ ಹುದ್ದೆ ಬ್ಯಾಕ್‌ಲಾಗ್ ಆಗುತ್ತದೆ.

೪) ಗಣಿತ ವಿಭಾಗದಲ್ಲಿ ಭಾರಿ ಕಾರ್ಯಭಾರವಿದ್ದು, ಶ್ರೀಮತಿ ಹೆಚ್.ಎಸ್. ಮಮತಾರವರನ್ನು ವಿಲೀನಿಕರಣಗೊಳಿಸಿದ್ದಲ್ಲಿ ಎಸ್‌ಸಿ ಪ್ರವರ್ಗಕ್ಕೆ ನಿರ್ದಿಷ್ಟಪಡಿಸಿರುವ ಹುದ್ದೆಯೊಂದನ್ನು ವರ್ಗಾಯಿಸಿ ಭರ್ತಿ ಮಾಡಬೇಕಾಗುತ್ತದೆ.

೩) ಈ ಸನ್ನಿವೇಶದಲ್ಲಿ ಕುವೆಂಪು ವಿಶ್ವವಿದ್ಯಾಲಯ ಕನ್ನಡ ಮತ್ತು ಗಣಿತ ವಿಭಾಗಗಳಲ್ಲಿ ತಲಾ ಒಂದು ಹುದ್ದೆಯನ್ನು ಎಸ್‌ಸಿ ಅಭ್ಯರ್ಥಿಗಳಿಂದ ಹಾಗೂ ಪ್ರಾಣಿಶಾಸ್ತ್ರ, ರೇಷ್ಮೆ ಕೃಷಿ ಹಾಗೂ ರಸಾಯನಶಾಸ್ತ್ರ ವಿಭಾಗಗಳಲ್ಲಿ ತಲಾ ಒಂದು ಹುದ್ದೆಯನ್ನು ಎಸ್‌ಟಿ ಅಭ್ಯರ್ಥಿಗಳಿಂದ ಬ್ಯಾಕ್‌ಲಾಗ್ ಹುದ್ದೆಗಳೆಂದು ಭರ್ತಿ ಮಾಡಲು (ಒಟ್ಟು ೪ ಹುದ್ದೆಗಳು) ಅನುಮತಿ ನೀಡಿ ಇತರ ಪ್ರಸ್ತಾಪಗಳ ಜೊತೆಗೆ ದಿನಾಂಕ: ೧೧-೧೦-೨೦೦೩ರ ಪತ್ರದಲ್ಲಿರುವ ಪ್ರಸ್ತಾವನೆಯಂತೆ ಎಲ್ಲಾ ಉಪನ್ಯಾಸಕರನ್ನು ವಿಲೀನಿಕರಣಗೊಳಿಸಲು ಪ್ರಸ್ತಾಪಿಸಿದೆ.

೪) ಈ ಮಧ್ಯೆ, ೧೯೯೪-೧೯೯೫ರ ಶೈಕ್ಷಣಿಕ ವರ್ಷದ ಕೊನೆಯ ದಿನಾಂಕದಂದು ಎರಡು ಶೈಕ್ಷಣಿಕ ವರ್ಷಗಳ ಅವಧಿಗೆ ಸೇವೆ ಸಲ್ಲಿಸಿಲ್ಲವಾದ್ದರಿಂದ ಅರ್ಹತೆ ನಿಬಂಧನೆಯನ್ನು ಪೂರೈಸುವುದಿಲ್ಲವೆಂಬ ಕಾರಣದ ಮೇಲೆ ದಿನಾಂಕ: ೦೨-೧೨-೨೦೦೩ರ ಸರ್ಕಾರಿ ಆದೇಶದಲ್ಲಿ ಕೈಬಿಟ್ಟಿರುವ ಶ್ರೀ ಟಿ.ಆರ್. ಪ್ರಭಾಕರ್‌ರವರು ೧೯೯೨-೯೩, ೧೯೯೩-೯೪ ಮತ್ತು ೧೯೯೪-೯೫ ಹಾಗೂ ನಂತರದಲ್ಲಿಯೂ ಸಹ ಸೇವೆ ಸಲ್ಲಿಸಿರುವುದಕ್ಕೆ ಸಂಬಂಧಿಸಿದಂತೆ ಅಗತ್ಯ ದಾಖಲೆಗಳೊಂದಿಗೆ ತಾವು ಪ್ರಕರಣವನ್ನು ಪರಿಗಣಿಸುವಂತೆ ಸರ್ಕಾರಕ್ಕೆ ಮನವಿ ಸಲ್ಲಿಸಿರುತ್ತಾರೆ. ದಾಖಲೆಗಳ ಅಲಭ್ಯತೆಯಿಂದ ತಾವು ೧೯೯೩-೯೪ನೇ ಸಾಲಿನಲ್ಲಿ ಸಲ್ಲಿಸಿರುವ ಸೇವೆಯನ್ನು ತೋರಿಸಿಲ್ಲವೆಂದು ತಿಳಿಸಲಾಗಿದೆ. ಶ್ರೀ ಟಿ.ಆರ್. ಪ್ರಭಾಕರ್‌ರವರು ಸಲ್ಲಿಸಿರುವ ದಾಖಲೆಗಳು ಮತ್ತು ಸೇವಾ ಪ್ರಮಾಣ ಪತ್ರಗಳನ್ನು ಪರಿಶೀಲಿಸಲಾಗಿದ್ದು, ಅವುಗಳಿಂದ ಅವರು ೧೯೯೪-೯೫ನೇ ಶೈಕ್ಷಣಿಕ ಸಾಲಿನ ಕೊನೆಯ ದಿನಾಂಕದಂದು ಎರಡು ಶೈಕ್ಷಣಿಕ ವರ್ಷಗಳ ಅವಧಿಗೆ ವಾಸ್ತವವಾಗಿ

ಸೇವೆ ಸಲ್ಲಿಸಿರುವುದು ವ್ಯಕ್ತವಾಗುತ್ತದೆ. ಆದ್ದರಿಂದ, ಅವರು ಸೇವೆಯನ್ನು ಸಹ ಪ್ರಾಣಿಶಾಸ್ತ್ರ ವಿಭಾಗದಲ್ಲಿ ಅಗತ್ಯವಿದ್ದಲ್ಲಿ ಬೇರೆ ವಿಭಾಗದಿಂದ ಹುದ್ದೆಯೊಂದನ್ನು ವರ್ಗಾಯಿಸಿ ಅವರ ಸೇವೆಯನ್ನು ವಿಲೀನಿಕರಣಗೊಳಿಸಲು ನಿರ್ಣಯಿಸಲಾಗಿದೆ.

೫) ಹುದ್ದೆಗಳು ಲಭ್ಯವಿಲ್ಲದ ಕಾರಣ ಕೈಬಿಡಲಾಗಿದ್ದ ರಸಾಯನಶಾಸ್ತ್ರ ತಾತ್ಕಾಲಿಕ ಉಪನ್ಯಾಸಕರಾದ ಶ್ರೀ ಶ್ರೀಕಂಠ ಎಸ್.ಎ ಇವರು ವಯಸ್ಸಿನಲ್ಲಿ ಹಿರಿಯರಾದ ತಮ್ಮನ್ನು ರಸಾಯನಶಾಸ್ತ್ರ ವಿಭಾಗದ ತಾತ್ಕಾಲಿಕ ಉಪನ್ಯಾಸಕರ ಜೇಷ್ಠತಾ ಪಟ್ಟಿಯಲ್ಲಿ ಶ್ರೀ ಯುವರಾಜ್ ಟಿ.ಸಿ.ಎಂ ಇವರಿಗಿಂತ ಮೇಲೆ ತೋರಿಸಬೇಕಾಗಿದ್ದು, ಅವರ ಸ್ಥಾನದಲ್ಲಿ ತಮ್ಮ ಸೇವೆಯನ್ನು ವಿಲೀನಿಕರಣಕ್ಕಾಗಿ ಪರಿಗಣಿಸಬೇಕೆಂದು ಕೋರಿ ಮನವಿ ಸಲ್ಲಿಸಿದ್ದಾರೆ. ಈ ವಿಷಯವನ್ನು ಪರಿಶೀಲಿಸಲಾಗಿದ್ದು, ಶ್ರೀ ಶ್ರೀಕಂಠರವರ ಪ್ರಕರಣವನ್ನು ಇತರರ ಜೊತೆಗೆ ವಿಲೀನಿಕರಣಕ್ಕಾಗಿ ಪರಿಗಣಿಸಲು ನಿರ್ಣಯಿಸಲಾಗಿದೆ.

೬) ಈ ಮಧ್ಯೆ, ಕುವೆಂಪು ವಿಶ್ವವಿದ್ಯಾಲಯ ಎಸ್‌ಸಿ ಪ್ರವರ್ಗಕ್ಕೆ ಸೇರಿದ ಮತ್ತೆರಡು ತಾತ್ಕಾಲಿಕ ಉಪನ್ಯಾಸಕರ ವಿಲೀನಿಕರಣಕ್ಕಾಗಿ ಪ್ರಸ್ತಾವನೆ ಸಲ್ಲಿಸಿದೆ. ಸಹ್ಯಾದ್ರಿ ಕಾಲೇಜುಗಳಲ್ಲಿ ಸೇವೆ ಸಲ್ಲಿಸುತ್ತಿರುವ ೫೬ ತಾತ್ಕಾಲಿಕ ಉಪನ್ಯಾಸಕರುಗಳ ಪಟ್ಟಿಯಲ್ಲಿ ಈ ಕೆಳಕಂಡ ಇಬ್ಬರು ಅಭ್ಯರ್ಥಿಗಳು ಇನ್ನೂ ವಿಲೀನಿಕರಣಗೊಳ್ಳಬೇಕಾಗಿದ್ದು,ಎಸ್‌ಸಿ ಪ್ರವರ್ಗಕ್ಕೆ ಸೇರಿದ್ದಾರೆ.

(i) ಶ್ರೀ ರಂಗರಾಜು ಕೆ. - ರಾಜ್ಯಶಾಸ್ತ್ರ ವಿಭಾಗ (ಎಸ್‌ಸಿ)

(ii) ಡಾ: ಪರಮೇಶ್ವರ್ ನಾಯಕ್ – ಸಸ್ಯಶಾಸ್ತ್ರ ವಿಭಾಗ(ಎಸ್‌ಸಿ) - ಪಿಹೆಚ್‌ಡಿ/ಎನ್‌ಇಟಿ

ಸಿಂಡಿಕೇಟು ಎಸ್‌ಸಿ/ಎಸ್‌ಟಿ ಅಭ್ಯರ್ಥಿಗಳಿಗೆ ಆದ್ಯತೆ ನೀಡುವ ವಿಷಯವನ್ನು ಚರ್ಚಿಸಿದ್ದು, ಮೇಲ್ಕಂಡ ಇಬ್ಬರು ಅಭ್ಯರ್ಥಿಗಳನ್ನು ಎಸ್‌ಸಿ ಪ್ರವರ್ಗಕ್ಕೆಂದು ಗುರುತಿಸಲಾಗಿರುವ ಬ್ಯಾಕ್‌ಲಾಗ್ ಹುದ್ದೆಗಳಲ್ಲಿ ಕನ್ನಡ ಮತ್ತು ಗಣಿತ ವಿಭಾಗಗಳಲ್ಲಿ ಎಸ್‌ಸಿ ಪ್ರವರ್ಗಕ್ಕೆ ಮೀಸಲಾಗಿರುವ ಹುದ್ದೆಗಳನ್ನು ವರ್ಗಾಯಿಸಿ ವಿಲೀನಿಕರಣಗೊಳಿಸಲು ಶಿಫಾರಸ್ಸು ಮಾಡಿದೆ.

೭) ಕುವೆಂಪು ವಿಶ್ವವಿದ್ಯಾಲಯವು ವಿಲೀನಿಕರಣಗೊಂಡ ತಾತ್ಕಾಲಿಕ ಉಪನ್ಯಾಸಕರುಗಳ ಇಂಟರ್ ಸೇ ಜೇಷ್ಟತೆಯ ಬಗ್ಗೆ ಸ್ಪಷ್ಟೀಕರಣ ಕೇಳಿದೆ. ಅವರುಗಳು ತಾತ್ಕಾಲಿಕ ಉಪನ್ಯಾಸಕರಾಗಿ ಸೇವೆಗೆ ಸೇರಿದ ದಿನಾಂಕಗಳನ್ನು ಇಂಟರ್ ಸೇ ಜೇಷ್ಠತೆಗಾಗಿ ಪರಿಗಣಿಸಬೇಕೆಂಬ ಅಭಿಪ್ರಾಯವನ್ನು ಸಿಂಡಿಕೇಟ್ ತಳೆದಿದೆ. ವಿಲೀನಿಕರಣಗೊಂಡ ತಾತ್ಕಾಲಿಕ ಉಪನ್ಯಾಸಕರುಗಳ ಇಂಟರ್ ಸೇ ಜೇಷ್ಠತೆಯನ್ನು ಅವರುಗಳು ತಾತ್ಕಾಲಿಕ ಉಪನ್ಯಾಸಕರಾಗಿ ಸೇವೆಗೆ ಸೇರಿದ ದಿನಾಂಕಗಳನ್ನು ಉಲ್ಲೇಖವಾಗಿಟ್ಟುಕೊಂಡು ನಿರ್ಣಯಿಸುವುದರ ಜೊತೆಗೆ ಸೀನಿಯಾರಿಟಿ ನಿಯಮಗಳಲ್ಲಿ ನಿರ್ದಿಷ್ಟಪಡಿಸಿರುವ ವಯಸ್ಸಿನಲ್ಲಿ ಜೇಷ್ಟತೆ ಇತ್ಯಾದಿ ಅಂಶಗಳನ್ನು ಗಣನೆಗೆ ತೆಗೆದುಕೊಂಡು ನಿರ್ಧರಿಸಬೇಕಾಗುತ್ತದೆ.

೮) ಕುವೆಂಪು ವಿಶ್ವವಿದ್ಯಾಲಯದಿಂದ ಸ್ವೀಕೃತವಾದ ಪ್ರಸ್ತಾವನೆಗಳು ಹಾಗೂ ಅಭ್ಯರ್ಥಿಗಳಿಂದ ಸ್ವೀಕೃತವಾದ ಮನವಿ ಗಳನ್ನು ಪರಿಗಣನೆಗೆ ತೆಗೆದುಕೊಂಡು ಕುವೆಂಪು ವಿಶ್ವವಿದ್ಯಾಲಯ ಶಿಫಾರಸ್ಸು ಮಾಡಿರುವಂತೆ ವಿವಿಧ ವಿಷಯಗಳಲ್ಲಿನ ಏಳು ಜನ ತಾತ್ಕಾಲಿಕ ಉಪನ್ಯಾಸಕರನ್ನು ೧೯೯೭ರ ವಿಶೇಷ ನಿಯಮಗಳು ಹಾಗೂ ತದನಂತರದ ತಿದ್ದುಪಡಿಗಳನ್ವಯ ದಿನಾಂಕ: ೦೨-೧೨-೨೦೦೩ರ ಸರ್ಕಾರಿ ಆದೇಶದಲ್ಲಿ ಈಗಾಗಲೇ ವಿಧಿಸಿರುವ ಷರತ್ತುಗಳಿಗೆ ಒಳಪಟ್ಟು ವಿಲೀನಿಕರಣಗೊಳಿಸಲು ನಿರ್ಣಯಿಸಲಾಗಿದೆ. ಆದ್ದರಿಂದ ಈ ಕೆಳಕಂಡ ಆದೇಶ.

**ಸರ್ಕಾರಿ ಆದೇಶ ಸಂಖ್ಯೆ ಇಡಿ ೭೯ ಯುಎಸ್‌ವಿ ೨೦೦೩, ಬೆಂಗಳೂರು, ದಿನಾಂಕ: ೦೧ನೇ ಮಾರ್ಚ್ ೨೦೦೪**

೮) ಪೀಠಿಕೆಯಲ್ಲಿ ವಿವರಿಸಿರುವ ಸನ್ನಿವೇಶಗಳ ಹಿನ್ನೆಲೆಯಲ್ಲಿ ಹಾಗೂ ದಿನಾಂಕ: ೦೨-೧೨-೨೦೦೩ರ ಸರ್ಕಾರಿ ಆದೇಶವನ್ನು ಮುಂದುವರೆಸುತ್ತಾ ಕುವೆಂಪು ವಿಶ್ವವಿದ್ಯಾಲಯದ ಘಟಕ ಕಾಲೇಜುಗಳಾದ ಸಹ್ಯಾದ್ರಿ ಕಲಾ ಮತ್ತು ವಿಜ್ಞಾನ ಕಾಲೇಜು ಮತ್ತು ಸಹ್ಯಾದ್ರಿ ವಿಜ್ಞಾನ ಕಾಲೇಜು ಶಿವಮೊಗ್ಗ ಇಲ್ಲಿ ವಿವಿಧ ವಿಷಯಗಳ ತಾತ್ಕಾಲಿಕ ಉಪನ್ಯಾಸಕರುಗಳಾಗಿ ಸೇವೆ ಸಲ್ಲಿಸುತ್ತಿರುವ ಮತ್ತು ವಿಲೀನಿಕರಣಕ್ಕೆ ಅರ್ಹತೆಯನ್ನು ಹೊಂದಿರುವ ಈ ಕೆಳಕಂಡ ಏಳು ಜನರನ್ನು ಕರ್ನಾಟಕ ರಾಜ್ಯ ಸಿವಿಲ್ ಸೇವೆಗಳು (ಕರ್ನಾಟಕ ಶಿಕ್ಷಣ ಇಲಾಖೆ ಸೇವೆಗಳಲ್ಲಿ ಅರೆಕಾಲಿಕ ಉಪನ್ಯಾಸಕನಾಗಿ ಕಾರ್ಯ ನಿರ್ವಹಿಸುತ್ತಿರುವ ವ್ಯಕ್ತಿಗಳ ವಿಲೀನಗೊಳಿಸುವಿಕೆ (ಕಾಲೇಜು ಶಿಕ್ಷಣ ಇಲಾಖೆ) (ವಿಶೇಷ) ನಿಯಮಗಳು ೧೯೯೭ ಮತ್ತು ತದನಂತರದ ತಿದ್ದುಪಡಿಗಳನ್ವಯ ತಕ್ಷಣದಿಂದ ಜಾರಿಗೆ ಬರುವಂತೆ ವಿಲೀನಿಕರಣ ಗೊಳಿಸಲು ರಾಜ್ಯ ಸರ್ಕಾರದ ಮಂಜೂರಾತಿಯನ್ನು ನೀಡಲಾಗಿದೆ.

| ಕ್ರ. ಸಂ. | ಹೆಸರು | ವಿಷಯ | ಹುದ್ದೆ |
|---|---|---|---|
| ೧ | ಶ್ರೀಮತಿ ಡೈಸಿ ಜಾಸ್ಮಿನ್ ಜಾರ್ಜ್ | ಕನ್ನಡ | ಸಾಮಾನ್ಯ ಪ್ರವರ್ಗದ ಒಂದು ಹುದ್ದೆ ಲಭ್ಯವಿದೆ |
| ೨ | ಶ್ರೀಮತಿ ಸುಮಿತ್ರಾ ವಿ. ಭಟ್ | ಸಂಸ್ಕೃತ | ಹುದ್ದೆಯು ಎಸ್‌ಸಿ ಪ್ರವರ್ಗಕ್ಕೆ ಮೀಸಲಾಗಿದೆ. ಆದರೆ, ದಿನಾಂಕ: ೨೨-೦೭-೧೯೯೪ ಸಂ. ಡಿಪಿಎಆರ್ ೩೫ ಎಸ್‌ಹೆಚ್‌ಎಂ ೧೯೯೪ರ ಆದೇಶದನ್ವಯ ಅರ್ಹ ಎಸ್‌ಸಿ/ಎಸ್‌ಟಿ ಅಭ್ಯರ್ಥಿ ಲಭ್ಯವಿಲ್ಲದಿರುವುದರಿಂದ ಪರಿಗಣಿಸಬಹುದಾಗಿದೆ |
| ೩. | ಶ್ರೀ ಪ್ರಭಾಕರ್ ಟಿ.ಆರ್. | ಪ್ರಾಣಿಶಾಸ್ತ್ರ | ಹುದ್ದೆ ಲಭ್ಯವಿಲ್ಲದಿದ್ದಲ್ಲಿ ಇತರ ವಿಭಾಗದಿಂದ ಹುದ್ದೆಯನ್ನು ವರ್ಗಾಯಿಸಿ |
| ೪ | ಶ್ರೀ ಶ್ರೀಕಂಠ ಎಸ್.ಎ | ರಸಾಯನಶಾಸ್ತ್ರ | ಜೇಷ್ಟತೆಯಲ್ಲಿ ಅವರಿಗಿಂತ ಕಿರಿಯರಾದ ಶ್ರೀ ಯುವರಾಜ್ ರವರನ್ನು ಈಗಾಗಲೇ ವಿಲೀನಿಕರಣಗೊಳಿಸಲಾಗಿದೆ. ಸಾಮಾನ್ಯ ಪ್ರವರ್ಗ ಮತ್ತು II-A ಪ್ರವರ್ಗದ ಎರಡು ಹುದ್ದೆಗಳು ಲಭ್ಯವಿವೆ |

| ಕ್ರ. ಸಂ. | ಹೆಸರು | ವಿಷಯ | ಹುದ್ದೆ |
|---|---|---|---|
| ೫. | ಶ್ರೀಮತಿ ಮಮತಾ ಹೆಚ್.ಎಸ್ | ಗಣಿತ | ಸಾಮಾನ್ಯ ಪ್ರವರ್ಗದ ಒಂದು ಹುದ್ದೆ ಲಭ್ಯವಿದೆ |
| ೬ | ಶ್ರೀ ಕೆ. ರಂಗರಾಜು | ರಾಜ್ಯಶಾಸ್ತ್ರ | ಕನ್ನಡ ವಿಭಾಗದಿಂದ ಹುದ್ದೆಯನ್ನು ವರ್ಗಾವಣೆ ಮಾಡಿ. |
| ೭ | ಡಾ: ಪರಮೇಶ್ವರ್ ನಾಯಕ್ | ಸಸ್ಯಶಾಸ್ತ್ರ | ಗಣಿತ ವಿಭಾಗದ ಹುದ್ದೆಯನ್ನು ವರ್ಗಾವಣೆ ಮಾಡಿ |

೯) ಮೇಲ್ಕಂಡ ತಾತ್ಕಾಲಿಕ ಉಪನ್ಯಾಸಕರುಗಳ ವಿಲೀನಿಕರಣವು ಈಗಾಗಲೇ ದಿನಾಂಕ: ೦೨-೧೨-೨೦೦೩ರ ಸರ್ಕಾರಿ ಆದೇಶದಲ್ಲಿ ವಿಧಿಸಲಾಗಿರುವ ಈ ಕೆಳಕಂಡ ಷರತ್ತುಗಳಿಗೆ ಒಳಪಟ್ಟಿವೆ.

(೧) ಈ ವಿಲೀನಿಕರಣವು ಕಟ್ಟುನಿಟ್ಟಾಗಿ ಕರ್ನಾಟಕ ರಾಜ್ಯ ಸಿವಿಲ್ ಸೇವೆಗಳು (ಕರ್ನಾಟಕ ಶಿಕ್ಷಣ ಇಲಾಖೆ ಸೇವೆಗಳಲ್ಲಿ ಅರೆಕಾಲಿಕ ಉಪನ್ಯಾಸಕನಾಗಿ ಕಾರ್ಯ ನಿರ್ವಹಿಸುತ್ತಿರುವ ವ್ಯಕ್ತಿಗಳ ವಿಲೀನಗೊಳಿಸುವಿಕೆ (ಕಾಲೇಜು ಶಿಕ್ಷಣ ಇಲಾಖೆ) (ವಿಶೇಷ) ನಿಯಮಗಳು ೧೯೯೬ರನ್ವಯ ಇರತಕ್ಕದ್ದು ಮತ್ತು ತದನಂತರದ ತಿದ್ದುಪಡಿಗಳಲ್ಲಿ ವಿಧಿಸಿರುವ ಷರತ್ತುಗಳಿಗೆ ಒಳಪಟ್ಟಿರುತ್ತದೆ.

(೨) ಯುಜಿಸಿಯು ಎನ್‌ಇಟಿ ಮಾಸು ಮಾಡುವ ಸಂಬಂಧದಲ್ಲಿ ನೀಡಿರುವ ವಿನಾಯಿತಿ ಸೇರಿದಂತೆ ಯುಜಿಸಿ ಪರಿನಿಯಮಾವಳಿಗಳಲ್ಲಿ ನಿರ್ದಿಷ್ಟಪಡಿಸಿರುವ ಅರ್ಹತೆಯನ್ನು ಪೂರೈಸುವ ತಾತ್ಕಾಲಿಕ ಉಪನ್ಯಾಸಕರುಗಳನ್ನು ರೂ. ೮೦೦೦-೧೩,೫೦೦ರ ಯುಜಿಸಿ ವೇತನ ಶ್ರೇಣಿಯಲ್ಲಿ ವಿಲೀನಗೊಳಿಸತಕ್ಕದ್ದು.

(೩) ನಾನ್ ಎನ್‌ಇಟಿ/ಎಸ್‌ಎಲ್‌ಇಟಿ ಅಭ್ಯರ್ಥಿಗಳನ್ನು ರೂ. ೬೦೦೦-೧೧,೨೦೦ರ ರಾಜ್ಯ ವೇತನ ಶ್ರೇಣಿಯಲ್ಲಿ ವಿಲೀನಿಕರಣಗೊಳಿಸತಕ್ಕದ್ದು. ಆದರೆ ಅಂತಹ ಅಭ್ಯರ್ಥಿಗಳು ಅರ್ಹತಾ ಪರೀಕ್ಷೆಯಲ್ಲಿ ಕನಿಷ್ಠ ಶೇ. ೫೫ ರಷ್ಟು ಅಂಕಗಳನ್ನು ತಪ್ಪದೇ ಹೊಂದಿರತಕ್ಕದ್ದು.

(೪) ವಿಲೀನಗೊಂಡ ಈ ಅರೆಕಾಲಿಕ ಉಪನ್ಯಾಸಕರುಗಳು ಎನ್.ಇ.ಟಿ/ಎಸ್.ಎಲ್.ಇ.ಟಿ.ಯನ್ನು ಪಾಸು ಮಾಡಲು ದಿನಾಂಕ: ೦೯-೦೭-೨೦೦೫ರವರೆಗೆ ಕಾಲಾವಕಾಶ ನೀಡಲಾಗಿದೆ. ಈ ಅವಧಿಯಲ್ಲಿ ಅವರು ಎನ್.ಇ.ಟಿ/ಎಸ್.ಎಲ್.ಇ.ಟಿ.ಯನ್ನು ಪಾಸು ಮಾಡಿದಲ್ಲಿ ಅವರು ಇತರ ಅರ್ಹ ಉಪನ್ಯಾಸಕರಿಗೆ ಲಭ್ಯವಾಗುವ ಯುಜಿಸಿ ವೇತನ ಶ್ರೇಣಿ ಪಡೆಯಲು ಅರ್ಹರಾಗುತ್ತಾರೆ. ಅವರು ಎನ್.ಇ.ಟಿ/ಎಸ್/ಎಲ್/ಇ/ಟಿ/ಯನ್ನು ದಿನಾಂಕ:೦೯-೦೭-೨೦೦೫ರೊಳಗೆ ಪಾಸು ಮಾಡದಿದ್ದಲ್ಲಿ ಇವರನ್ನು ಭಾರತದ ಸರ್ವೋಚ್ಛ ನ್ಯಾಯಾಲಯವು ಎಸ್.ಎಲ್.ಪಿ (ಸಿವಿಲ್) ಸಂಖ್ಯೆ: ೧೫೫೯೧/೯೯ಕ್ಕೆ ಸಂಬಂಧಿಸಿದಂತೆ ಸಿವಿಲ್ ಅಪೀಲ್ ಸಂಖ್ಯೆ: ೨೭/೨೦೦೧ರ ಮೇಲೆ ದಿನಾಂಕ: ೦೪-೦೧-೨೦೦೧ರಂದು ನೀಡಿದ ತೀರ್ಪಿನನ್ವಯ ಸೇವೆಯಿಂದ ತೆಗೆದು ಹಾಕಲಾಗುವುದು.

(೫) ಇವರು ಪರಿವೀಕ್ಷಣಾ ಅವಧಿಯಲ್ಲಿ ೧೯೭೪ರ ಕ.ಸ.ಸೇ (ಸೇವಾ ಮತ್ತು ಕನ್ನಡ ಭಾಷೆ ಪರೀಕ್ಷೆಗಳು) ನಿಯಮಾವಳಿಗಳಲ್ಲಿ ನಿಗದಿಪಡಿಸಿರುವ ಕನ್ನಡ ಭಾಷಾ ಮತ್ತು ಇಲಾಖಾ ಪರೀಕ್ಷೆಗಳಲ್ಲಿ ಉತ್ತೀರ್ಣರಾಗತಕ್ಕದ್ದು. ಹಾಗೆಯೇ ಇವರು ಒಂದು ತಿಂಗಳ ಓರಿಯೆಂಟೇಷನ್ ಕೋರ್ಸ್ ತರಬೇತಿಯನ್ನು ಕಡ್ಡಾಯವಾಗಿ ಪೂರ್ಣ ಗೊಳಿಸತಕ್ಕದ್ದು.

(೬) ಇವರ ಸೇವಾ ಜ್ಯೇಷ್ಠತೆ ಮೀಸಲಾತಿ ಮತ್ತು ಅರೆಕಾಲಿಕ ಉಪನ್ಯಾಸಕರುಗಳ ಇಂಟರ್ ಸೇ ಜೇಷ್ಟತಾ ಪಟ್ಟಿಯನ್ನು ಸಿದ್ಧಪಡಿಸಿ ಪರಿಷ್ಕರಿಸುವ ಬದಲಾವಣೆಗೆ ಒಳಪಟ್ಟಿರುತ್ತದೆ.

(೭) ಇವರುಗಳ ನೇಮಕಾತಿಯು ಅರೆಕಾಲಿಕ ಉಪನ್ಯಾಸಕರುಗಳ ಸೇವಾ ವಿಲೀನತೆ ಬಗ್ಗೆ ಬಾಕಿಯಿರುವ/ಉದ್ಭವಿಸಲಿರುವ ನ್ಯಾಯಾಲಯದ ತಕರಾರುಗಳಲ್ಲಿ ನ್ಯಾಯಾಲಯಗಳು ನೀಡಲಿರುವ ತೀರ್ಪಿಗೆ ಬದ್ಧವಾಗಿರುವ ಷರತ್ತಿಗೆ ಒಳಪಟ್ಟಿರುತ್ತದೆ.

(೮) ಆಯಾ ಕಾಲೇಜಿನ ಪ್ರಾಂಶುಪಾಲರುಗಳು, ಅವರುಗಳ ವಿದ್ಯಾರ್ಹತೆ, ಜನ್ಮ ದಿನಾಂಕ: ಜಾತಿ/ಮೀಸಲಾತಿ ಇವುಗಳ ಬಗ್ಗೆ ಮೂಲ ದಾಖಲೆಗಳನ್ನು ಪರಿಶೀಲಿಸಿ ಖಾತ್ರಿಪಡಿಸಿಕೊಳ್ಳತಕ್ಕದ್ದು. ಪರಿಶೀಲಿಸಿದ ಬಗ್ಗೆ ದೃಢೀಕರಿಸಿದ ಪ್ರಮಾಣ ಪತ್ರವನ್ನು ಅವರ ಸೇವಾ ಪುಸ್ತಕದಲ್ಲಿ ದಾಖಲಿಸತಕ್ಕದ್ದು.

(೯) ಮೀಸಲಾತಿ ವರ್ಗದಲ್ಲಿ ನೇಮಕಾತಿಗೊಂಡಿರುವ ಅರೆಕಾಲಿಕ ಉಪನ್ಯಾಸಕರುಗಳು ತಮ್ಮ ಜಾತಿ ದೃಢೀಕರಣದ ಬಗ್ಗೆ ಸಕ್ಷಮ ಪ್ರಾಧಿಕಾರದಿಂದ ಪಡೆದ ಜಾರಿ ಸಿಂಧುತ್ವ ಪ್ರಮಾಣ ಪತ್ರವನ್ನು ಕರ್ತವ್ಯ ವರದಿ ಸಲ್ಲಿಸುವಾಗ ಹಾಜರುಪಡಿಸತಕ್ಕದ್ದು.

೮) ಕುವೆಂಪು ವಿಶ್ವವಿದ್ಯಾಲಯವು ಮೇಲ್ಕಂಡ ಏಳು ತಾತ್ಕಾಲಿಕ ಉಪನ್ಯಾಸಕರುಗಳನ್ನು ಮೇಲೆ ನಿರ್ದಿಷ್ಟಪಡಿಸಿರುವ ವಿಧಿ-ವಿಧಾನವನ್ನನುಸರಿಸಿ ಮತ್ತು ಮೇಲ್ಕಂಡ ಷರತ್ತುಗಳಿಗೊಳಪಟ್ಟು ವಿಲೀನಿಕರಣ ಆದೇಶವನ್ನು ಹೊರಡಿಸತಕ್ಕದ್ದು.

೯) ವಿಲೀನಗೊಂಡ ತಾತ್ಕಾಲಿಕ ಉಪನ್ಯಾಸಕರುಗಳ ಇಂಟರ್ ಸೇ ಜೇಷ್ಟತೆಯನ್ನು ಅವರುಗಳು ತಾತ್ಕಾಲಿಕ ಉಪನ್ಯಾಸಕರುಗಳಾಗಿ ಸೇವೆಗೆ ಸೇರಿದ ದಿನಾಂಕವನ್ನು ಉಲ್ಲೇಖವಾಗಿಟ್ಟುಕೊಂಡು ಜೇಷ್ಟತೆಯನ್ನು ನಿರ್ಧರಿಸುವ ಇತರ ಅಂಶಗಳನ್ನು ಗಣನೆಗೆ ತೆಗೆದುಕೊಂಡು ನಿರ್ಧರಿಸತಕ್ಕದ್ದು.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 332

**ಸುಂದರ ರಾಜ ಗುಪ್ತ**

ಸರ್ಕಾರದ ಅಧೀನ ಕಾರ್ಯದರ್ಶಿ, ಶಿಕ್ಷಣ ಇಲಾಖೆ (ವಿಶ್ವವಿದ್ಯಾಲಯ ಮತ್ತು ಸಾಮಾನ್ಯ-೨).

## ಆರ್ಥಿಕ ಸಚಿವಾಲಯ

**ವಿಷಯ:** 2003-04ನೇ ಸಾಲಿಗೆ ಜಿಲ್ಲಾ ಪಂಚಾಯತ್‌ಗಳಿಗೆ ವರ್ಗಾಯಿತ ರಿಗ್ ಯಂತ್ರಗಳ ನಿರ್ವಹಣೆಗೆ 2ನೇ ಕಂತಿನ ಅನುದಾನ ಬಿಡುಗಡೆ ಮಾಡುವ ಬಗ್ಗೆ.

**ಓದಲಾಗಿದೆ:** ಗ್ರಾಮೀಣ ಅಭಿವೃದ್ಧಿ ಮತ್ತು ಪಂಚಾಯತ್ ರಾಜ್ ಇಲಾಖೆಯ ಕಡತ ಸಂಖ್ಯೆ: ಗ್ರಾಅಪ 720 ಗ್ರಾನೀಸ (4) 2003.

**ಪ್ರಸ್ತಾವನೆ:**

ಗ್ರಾಮೀಣ ಅಭಿವೃದ್ಧಿ ಮತ್ತು ಪಂಚಾಯತ್ ರಾಜ್ ಇಲಾಖೆಯು ಹಿಂದಿನ ಸಾರ್ವಜನಿಕ ಆರೋಗ್ಯ ತಾಂತ್ರಿಕ ವಲಯದ ಕೊಳವೆ ಬಾವಿ ಕೊರೆಯುವ ವಿಭಾಗ ಮತ್ತು ಯಾಂತ್ರಿಕ ವಿಭಾಗಗಳಿಂದ ರಿಗ್ ಯಂತ್ರ ಮತ್ತಿತರ ವಾಹನಗಳನ್ನು ವಿವಿಧ ಜಿಲ್ಲಾ ಪಂಚಾಯತ್‌ಗಳಿಗೆ ವರ್ಗಾಯಿಸಲಾಗಿರುತ್ತದೆ. ಇವುಗಳ ನಿರ್ವಹಣೆಗೆ ಆಯವ್ಯಯದಲ್ಲಿ ಒಟ್ಟು ಅನುದಾನವನ್ನು ಒದಗಿಸಿದ್ದು, ಈಗ ಈ ಜಿಲ್ಲಾ ಪಂಚಾಯಿತಿಗಳಿಗೆ ವರ್ಗಾಯಿಸಲಾದ ವಾಹನಗಳ ಸಂಖ್ಯೆಗನುಗುಣವಾಗಿ ಲೆಕ್ಕ ಶೀರ್ಷಿಕೆ 2215-01-052-0-03 (ಯೋಜನೇತರ) ಅಡಿಯಲ್ಲಿ ಒದಗಿಸಲಾದ ಒಟ್ಟು ರೂ. 154.56 ಲಕ್ಷಗಳಲ್ಲಿ ರೂ.77.28 ಲಕ್ಷಗಳನ್ನು 27 ಜಿಲ್ಲಾ ಪಂಚಾಯತಿಗಳಿಗೆ ಬಿಡುಗಡೆ ಮಾಡಲು ಮೇಲೆ ಓದಲಾದ ಪ್ರಸ್ತಾವನೆಯಲ್ಲಿ ಕೋರಲಾಗಿದೆ.

ಪ್ರಸ್ತಾವನೆಯನ್ನು ಪರಿಶೀಲಿಸಿ ಈ ಕೆಳಗಿನಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ಆಇ 397 ವೆಚ್ಚ-6 2004, ಬೆಂಗಳೂರು, ದಿನಾಂಕ: 3ನೇ ಮಾರ್ಚ್ 2004**

ಮೇಲಿನ ಪ್ರಸ್ತಾವನೆಯಲ್ಲಿ ವಿವರಿಸಿದಂತೆ ಗ್ರಾಮೀಣಾಭಿವೃದ್ಧಿ ಇಂಜಿನಿಯರಿಂಗ್ ಇಲಾಖೆಯ ಪುನರ್ ರಚನೆಯ ನಂತರ ರಿಗ್ ಯಂತ್ರಗಳನ್ನು ಜಿಲ್ಲಾ ಪಂಚಾಯತ್‌ಗಳಿಗೆ ವರ್ಗಾಯಿಸಿರುವುದರಿಂದ ಲೆಕ್ಕ ಶೀರ್ಷಿಕೆ 2215-01-052-0-03 (ಯೋಜನೇತರ) ಅಡಿಯಲ್ಲಿ ಒದಗಿಸಿರುವ ಒಟ್ಟು ಅನುದಾನ (ಲಮ್‌ಸಮ್) ರೂ.154.56 ಲಕ್ಷಗಳಲ್ಲಿ ಎರಡನೇ ಕಂತಾಗಿ ರೂ.77.28 ಲಕ್ಷಗಳನ್ನು ಈ ಆದೇಶಕ್ಕೆ ಲಗತ್ತಿಸಿರುವ ಅನುಬಂಧದಲ್ಲಿ ಸೂಚಿಸಿದಂತೆ ಜಿಲ್ಲಾ ಪಂಚಾಯತ್‌ಗಳಿಗೆ ಬಿಡುಗಡೆ ಮಾಡಿದೆ.

ಹೀಗೆ ಬಿಡುಗಡೆ ಮಾಡಲಾದ ಮೊತ್ತವನ್ನು 2003-04ನೇ ಸಾಲಿನ ರಾಜ್ಯ ನಿಧಿಯಲ್ಲಿ ಲೆಕ್ಕ ಶೀರ್ಷಿಕೆ 2215-01-197-2-01-300 (ಯೋಜನೇತರ) ಅಡಿಯಲ್ಲಿ ಭರಿಸುವಂತೆ ಸೂಚಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

**ಎಂ. ಬಸವರಾಜ್**

ಸರ್ಕಾರದ ಅಧೀನ ಕಾರ್ಯದರ್ಶಿ, ಆರ್ಥಿಕ ಇಲಾಖೆ (ಜಿ.ಪಂ.)

**ಅನುಬಂಧ-1**

**ಸರ್ಕಾರಿ ಆದೇಶ ಸಂಖ್ಯೆ: ಆಇ 397 ವೆಚ್ಚ-6 2004 ದಿನಾಂಕ: 3-3-2004 ಜಿಲ್ಲಾವಾರು ಬಿಡುಗಡೆ ಮಾಡಲಾದ ಅನುದಾನದ ವಿವರಗಳು**

| ಕ್ರ. ಸಂ. | ಜಿಲ್ಲಾ ಪಂಚಾಯತ್ | 2ನೇ ಕಂತಿನ ಅನುದಾನ (ರೂ. ಲಕ್ಷಗಳಲ್ಲಿ) |
|---|---|---|
| 1 | ಬೆಂಗಳೂರು ನಗರ | 5.20 |
| 2 | ಬೆಂಗಳೂರು (ಗ್ರಾಮಾಂತರ) | 3.25 |
| 3 | ಚಿತ್ರದುರ್ಗ | 2.50 |
| 4. | ಕೋಲಾರ | 3.50 |
| 5 | ಶಿವಮೊಗ್ಗ | 3.00 |
| 6 | ತುಮಕೂರು | 3.25 |
| 7 | ಮೈಸೂರು | 2.50 |
| 8 | ಚಿಕ್ಕಮಗಳೂರು | 1.33 |
| 9 | ಹಾಸನ | 6.25 |
| 10 | ಮಂಡ್ಯ | 2.50 |
| 11 | ಬೆಳಗಾಂ | 6.00 |
| 12 | ಬಿಜಾಪುರ | 3.50 |
| 13 | ಧಾರವಾಡ | 2.50 |
| 14 | ಉತ್ತರ ಕನ್ನಡ | 1.50 |
| 15 | ಗುಲ್ಬರ್ಗಾ | 5.50 |
| 16 | ಬಳ್ಳಾರಿ | 2.50 |
| 17 | ಬೀದರ್ | 2.50 |
| 18 | ರಾಯಚೂರು | 3.25 |

| ಕ್ರ. ಸಂ. | ಜಿಲ್ಲಾ ಪಂಚಾಯತ್ | 2ನೇ ಕಂತಿನ ಅನುದಾನ (ರೂ. ಲಕ್ಷಗಳಲ್ಲಿ) |
|---|---|---|
| 19 | ದಾವಣಗೆರೆ | 2.25 |
| 20 | ಚಾಮರಾಜನಗರ | 1.75 |
| 21 | ಬಾಗಲಕೋಟೆ | 3.00 |
| 22 | ಗದಗ್ | 2.50 |
| 23 | ಹಾವೇರಿ | 2.25 |
| 24 | ಕೊಪ್ಪಳ | 1.50 |
| 25 | ದಕ್ಷಿಣ ಕನ್ನಡ | 1.50 |
| 26 | ಕೊಡಗು | 0.50 |
| 27 | ಉಡುಪಿ | 1.50 |
| | **ಒಟ್ಟು ಮೊತ್ತ** | **77.28** |

**ಎಂ. ಬಸವರಾಜ್**

ಪಿ.ಆರ್. 333 ಸರ್ಕಾರದ ಅಧೀನ ಕಾರ್ಯದರ್ಶಿ, ಆರ್ಥಿಕ ಇಲಾಖೆ (ಜಿ.ಪಂ.)

## ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್ ರಾಜ್ ಸಚಿವಾಲಯ

**ವಿಷಯ:** ಲೆಕ್ಕ ಶೀರ್ಷಿಕೆ 2515-00-800-0-08 ರಲ್ಲಿ ಉಪಲೆಕ್ಕ ಶೀರ್ಷಿಕೆ -003-ವೇತನ ಸಿಬ್ಬಂದಿಯ ಬಗ್ಗೆ ಹೆಚ್ಚುವರಿ ಹಣ ಬಿಡುಗಡೆ ಕುರಿತು.

**ಉಲ್ಲೇಖ:** ಆರ್ಥಿಕ ಇಲಾಖೆಯ ಟಿಪ್ಪಣಿ ಸಂಖ್ಯೆ ಆಇ 2457 ವೆ-6-2003 ದಿನಾಂಕ 13-12-2004.

**ಪ್ರಸ್ತಾವನೆ:**

ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್‌ರಾಜ್ ಇಲಾಖೆಯ ನಿರ್ದೇಶಕರು (ಎಸ್‌ಇಪಿ) ಇವರ ಅಧೀನದಲ್ಲಿ ಬರುವ ಡಿಆರ್‌ಡಿಎ ಆಡಳಿತ ವೆಚ್ಚದ ಲೆಕ್ಕ ಶೀರ್ಷಿಕೆ 2515-00-800-0-08 (ಎಸ್‌ಇಪಿ) ಉಪ ಶೀರ್ಷಿಕೆ-003 ವೇತನ ಸಿಬ್ಬಂದಿ ಅಡಿಯಲ್ಲಿ 2003-04ನೇ ಸಾಲಿನ ಆಯವ್ಯಯದಲ್ಲಿ ಹಂಚಿಕೆ ಮಾಡಲಾಗಿದ್ದ ಅನುದಾನವು ಪೂರ್ಣವಾಗಿ ಖರ್ಚಾಗಿರುತ್ತದೆ. ಆದ್ದರಿಂದ ಉಪ ಶೀರ್ಷಿಕೆ-059-ಇತರೆ ಖರ್ಚು ಇದರಡಿಯಲ್ಲಿ ಅನುದಾನ ಲಭ್ಯವಿದ್ದು, ಸದರಿ ಉಪ ಶೀರ್ಷಿಕೆಯಿಂದ ಪುನರ್ ವಿನಿಯೋಗದ ಮೂಲಕ ಭರಿಸಲು ಆರ್ಥಿಕ ಇಲಾಖೆಗೆ ಪ್ರಸ್ತಾವನೆಯನ್ನು ಕಳಿಸಲಾಗಿತ್ತು ಉಲ್ಲೇಖದಲ್ಲಿ ಕಾಣಿಸಿದ ಟಿಪ್ಪಣಿಯಲ್ಲಿ ಆರ್ಥಿಕ ಇಲಾಖೆಯು ಪ್ರಸ್ತಾವನೆಗೆ ಸಹಮತಿಯನ್ನು ನೀಡಿದೆ. ಆದ್ದರಿಂದ ಈ ಕೆಳಗಿನಂತೆ ಆದೇಶ.

**ಸರ್ಕಾರದ ಆದೇಶ ಸಂಖ್ಯೆ ಗ್ರಾಅಪ 26 ಉಘ 2003, ದಿನಾಂಕ 4ನೇ ಮಾರ್ಚ್ 2004**

ಮೇಲೆ ಪ್ರಸ್ತಾವನೆಯಲ್ಲಿ ವಿವರಿಸಿರುವ ಹಿನ್ನೆಲೆಯಲ್ಲಿ 2003-04ನೇ ಸಾಲಿಗೆ ಗ್ರಾಮೀಣಾಭಿವೃದ್ಧಿ ಪಂಚಾಯತ್‌ರಾಜ್ ಇಲಾಖೆಯ (ಎಸ್‌ಇಪಿ) ನಿರ್ದೇಶಕರ ಅಧೀನದಲ್ಲಿ ಬರುವ ಲೆಕ್ಕ ಶೀರ್ಷಿಕೆ-2515-00-800-0-08 ರಡಿಯಲ್ಲಿ ಬರುವ ಉಪಲೆಕ್ಕ ಶೀರ್ಷಿಕೆಗಳಲ್ಲಿ ಈ ಕೆಳಗಿನಂತೆ ಅನುದಾನವನ್ನು ಪುನರ್ ವಿನಿಯೋಗದ ಮೂಲಕ ಭರಿಸಲು ಮಂಜೂರಾತಿ ಮಾಡಿದೆ.

| **ಯಾವ ಉಪಲೆಕ್ಕ ಶೀರ್ಷಿಕೆಯಿಂದ** | **ಯಾವ ಉಪಲೆಕ್ಕ ಶೀರ್ಷಿಕೆಗೆ** | **ಮೊತ್ತ** |
|---|---|---|
| 1. 2515-00-800-0-08-059-ಇತರೆ ಖರ್ಚು | 2515-00-800-0-08-003-ವೇತನ ಸಿಬ್ಬಂದಿ | ರೂ. 3.25 ಲಕ್ಷ |

ಈ ಆದೇಶವನ್ನು ಅ.ಟಿ. ಸಂಖ್ಯೆ ಆಇ 2457 ವೆ-6 2003 ದಿನಾಂಕ: 13-2-2004 ರಲ್ಲಿ ಆರ್ಥಿಕ ಇಲಾಖೆಯು ನೀಡಿದ ಸಹಮತಿಯ ಮೇರೆಗೆ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 334 **ಕೆ.ಎಸ್. ಶ್ಯಾಮಸುಂದರ್**

ಉಪ ನಿರ್ದೇಶಕರು (ವಿಆಕಾ) ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್ ರಾಜ್ ಇಲಾಖೆ.

## ಜಲ ಸಂಪನ್ಮೂಲ ಸಚಿವಾಲಯ

### ತಿದ್ದುಪಡಿ

**ಸಂ:ಸನೀಇ 40 ಅಜಅ 2002, ಬೆಂಗಳೂರು, ದಿನಾಂಕ: 10ನೇ ಮಾರ್ಚ್ 2004**

ರಾಜ್ಯದಲ್ಲಿ ಅಂತರ್ಜಲವನ್ನು ಅತ್ಯುತ್ತಮ ರೀತಿಯಲ್ಲಿ ವಿನಿಯೋಗಿಸಲು ಕೈಗೊಳ್ಳಬೇಕಾದ ಕ್ರಮಗಳ ಬಗ್ಗೆ ದಿನಾಂಕ:9.2.2004ರಂದು ಹೊರಡಿಸಿರುವ ಸರ್ಕಾರದ ಆದೇಶ ಸಂಖ್ಯೆಯನ್ನು 'ಸನೀಇ 04 ಅಜಅ 2003' ರ ಬದಲಾಗಿ 'ಸನೀಇ 40 ಅಜಅ 2002' ಎಂದು ಓದಿಕೊಳ್ಳುವುದು.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 335 **ವಿ. ಗೋವಿಂದರಾಜ್**

ವಿಶೇಷ ಕರ್ತವ್ಯಾಧಿಕಾರಿ, ಜಲ ಸಂಪನ್ಮೂಲ ಇಲಾಖೆ (ಸಣ್ಣ ನೀರಾವರಿ)